# ಪೋಲೀಸ್ ನೇತೃತ್ವದಲ್ಲೇ ದಲಿತರ ಗುಡಿಸಲುಗಳಿಗೆ ಬೆಂಕಿ

ಮೈಸೂರು ಜಿಲ್ಲೆಯ ಯಳಂದೂರಿನ ಸಾಕಷ್ಟು ಹಣ ಮತ್ತು ಜಮೀನು ಹೊಂದಿರುವ ನಾಯಕ್ ಜಾತಿಯವರು ಹರಿಜನರ ಗುಡಿಸಲುಗಳಿಗೆ ಬೆಂಕಿ ಹಚ್ಚಿ ೧೨ ಗುಡಿಸಲುಗಳನ್ನು ಭಸ್ಮ ಮಾಡಿದ ಘಟನೆಯೊಂದು ವರದಿಯಾಗಿದೆ. ತಾ ೧೪. ೭. ೧೯೭೭ ರಂದು ಬೆಳಿಗ್ಗೆ ೧೧–೩೦ ಗಂಟೆಯಲ್ಲಿ ನಡೆದ ಈ ಘಟನೆಗೆ ಯಳಂದೂರು ಪೋಲೀಸ್ ಸಬ್‌ಇನ್ಸ್‌ಪೆಕ್ಟರ ಪೂರ್ಣ ಬೆಂಬಲವಿತ್ತೆಂದೂ, ನಾಯಕರು ಹರಿಜನರ ಗುಡಿಸಲುಗಳಿಗೆ ಬೆಂಕಿ ಹಚ್ಚಿ ಲೂಟಿ ಮಾಡುತ್ತಿದ್ದಾಗ ಸಬ್ ಇನ್ಸ್‌ಪೆಕ್ಟರು ಸ್ಥಳದಲ್ಲೇ ನಿಂತು ನಾಯಕರನ್ನು ಬೆಂಬಲಿಸಿದರೆಂದು ಗೊತ್ತಾಗಿದೆ.

ನಾಯಕರಿಂದ ಸಾಕಷ್ಟು ಹಣ ಲಂಚ ಪಡೆದಿರುವ ಈ ಸಬ್ ಇನ್ಸ್‌ಪೆಕ್ಟರು ಈ ಘಟನೆಗೆ ಮುಖ್ಯ ಕಾರಣರಾದ ರಂಗಸ್ವಾಮಿ, ಪುಟ್ಟಸ್ವಾಮಿ, ಚಿಕ್ಕರಂಗ ನಾಯ್ಕ ಮತ್ತು ಬಂಗಾರು ಇತ್ಯಾದಿ ನಾಯಕ್ ಮುಖಂಡರುಗಳ ಮೇಲೆ ಇದುವರೆಗೆ ಯಾವುದೇ ಕ್ರಮ ಕೈಗೊಳ್ಳದಿರುವುದರಿಂದ ಯಳಂದೂರಿನ ಹರಿಜನರು ಇನ್ನೂ ಭಯಭೀತಿಗೊಳಗಾಗಿದ್ದಾರೆಂದು ತಿಳಿದು ಬಂದಿದೆ.

ಕೂಲಿ ಮಾಡಿಯಷ್ಟೇ ಬದುಕುವ ಇಲ್ಲಿನ ಹರಿಜನ ಮತ್ತು ಸಾಕಷ್ಟು ಹಣ, ಜಮೀನು ಹೊಂದಿರುವ ನಾಯಕರ ನಡುವೆ ಮೊದಲಿಂದಲೂ ದ್ವೇಷ ಇದ್ದು, ತಾ. ೧೩. ೭. ೭೭ರಂದು ಒಂದು ಹೋಟೆಲ್‌ನಲ್ಲಿ ಹೋಟೆಲ್ ಮಾಲೀಕನ ಮತ್ತು ಒಬ್ಬ ಹರಿಜನ ವ್ಯಕ್ತಿಯ ನಡುವೆ ಹಣದ ಬಗ್ಗೆ ಮಾತಾಗುತ್ತಿದ್ದಾಗ ನಾಯಕ ಯುವಕರು ಮಧ್ಯೆ ಪ್ರವೇಶಿಸಿ "ಹೊಲೆ ಮಾದಿಗರೆಲ್ಲ ಹೋಟ್ಲೊಳಕ್ಕೆ ಬರಂಗಾಯ್ತಾಬಿಟ್ರು" ಎಂದು ಗಲಾಟೆ ಮಾಡಿದರೆಂದೂ, ಇದರಿಂದ ಕುಪಿತಗೊಂಡ ಹರಿಜನ ಯುವಕರು ನಾಯಕ್ ಯುವಕರಿಗೆ ಥಳಿಸಿದ ಒಂದು ಪ್ರಸಂಗ ಮೇಲಿನ ಘಟನೆಗೆ ಮುಖ್ಯ ಕಾರಣವೆಂದು ತಿಳಿದು ಬಂದಿದೆ. ಯಳಂದೂರಿನ ಹೋಟೆಲುಗಳಿಗೆ ಕಳೆದ ವರ್ಷದಿಂದ ಮಾತ್ರ ಹರಿಜನರಿಗೆ ಪ್ರವೇಶವಿದ್ದು ಅದಕ್ಕೆ ಮೊದಲು ಯಾವ ಹೋಟೆಲುಗಳಿಗೂ ಹೋಗುವಂತಿರಲಿಲ್ಲ ಎಂದು ಗೊತ್ತಾಗಿದೆ.

ತಾ. ೧೩. ೭. ೭೭ರಂದು ಸಾಯಂಕಾಲ ಹೋಟೆಲಿನಲ್ಲಿ ನಡೆದ ಪ್ರಸಂಗದಿಂದಾಗಿ ಕೋಪಗೊಂಡ ನಾಯಕರು ಒಟ್ಟಾಗಿ ತಾ. ೧೪. ೭. ೭೭ರಂದು ಬೆಳಿಗ್ಗೆ ೧೧-೩೦ ಗಂಟೆಗೆ ಹರಿಜನರ ಗುಡಿಸಲುಗಳನ್ನು ನಾಲ್ಕು ಕಡೆಯಿಂದೂ ಸುತ್ತುವರಿದು ಬೆಂಕಿ ಹಚ್ಚಿ ಲೂಟಿ ಮಾಡಿದರಲ್ಲದೆ ಸಿಕ್ಕವರಿಗೆ ಥಳಿಸಿದರೆಂದೂ, ಈ ಸಮಯಕ್ಕಾಗಲೇ ನಾಯಕರಿಂದ ಲಂಚಪಡೆದಿದ್ದ ಸಬ್‌ಇನ್ಸ್‌ಪೆಕ್ಟರು ಸ್ಥಳದಲ್ಲೇ ಇದ್ದರೂ ಹರಿಜನ

[ ಕೊನೆಯ ಪುಟಕ್ಕೆ ]




ಸಂಪುಟ : 2    ಬೆಲೆ : ೨೦ ಪೈಸೆ    ಆಗಸ್ಟ್, ೧೯೭೭    ಸಂಚಿಕೆ : ೪–೫

# ಶೋಷಣೆಯ ವಿರುದ್ಧ ಸಹಸ್ರ ದಲಿತರ ಮೆರವಣಿಗೆ

ದಲಿತರ ಉದ್ಧಾರಕ್ಕೆ ಹಾಕಿಕೊಂಡಿರುವ ಕಾನೂನು ಕಾಯಿದೆಗಳನ್ನು ಸಂವಿಧಾನಬದ್ಧವಾಗಿ ಜಾರಿಗೆತರಲು ೩೦ ವರ್ಷಗಳಿಂದಲೂ ವಿಫಲವಾಗಿರುವ ಸರ್ಕಾರದ ಅನ್ಯಾಯಕ್ಕೆ ಮತ್ತು ದಿನನಿತ್ಯ ದೇಶದಾದ್ಯಂತ ದಲಿತರ ಮೇಲೆ ನಡೆಯುತ್ತಿರುವ ಅಮಾನುಷ ದೌರ್ಜನ್ಯಗಳ ವಿರುದ್ಧ ಜೂನ್ ೧೯ರಂದು ಬೆಂಗಳೂರಿನಲ್ಲಿ ಬೃಹತ್ ಮೆರವಣಿಗೆಯೊಂದು ತನ್ನೆಲ್ಲಾ ಪ್ರತಿಭಟನೆಯನ್ನು ಪ್ರದರ್ಶಿಸಿತು. ಅನ್ಯಾಯ ಪ್ರತಿಭಟಿಸಿದ ತಪ್ಪಿಗೆ ನೌಕರಿ ಕಳೆದುಕೊಂಡಿದ್ದ ಹೈಕೋರ್ಟಿನ ನೌಕರ ಶಿವಣ್ಣನವರ ಘಟನೆ ಹಿನ್ನೆಲೆಯಲ್ಲಿ ಮೆರವಣಿಗೆಯನ್ನು ಕರ್ನಾಟಕ ದಲಿತ ಕ್ರಿಯಾ ಸಮಿತಿಯು ಏರ್ಪಡಿಸಿತ್ತು.

ಸಹಸ್ರಾರು ಸಂಖ್ಯೆಯಲ್ಲಿ ಕಾರ್ಮಿಕರು, ಕೊಳಚೆ ಪ್ರದೇಶದ ನಿವಾಸಿಗಳು, ವಿದ್ಯಾರ್ಥಿಗಳು, ಶಾಲಾ ಬಾಲಕರು, ವೃದ್ಧಮಹಿಳೆಯರು, ಸರ್ಕಾರಿ ಮತ್ತು ಖಾಸಗಿ ನೌಕರರು ಮೆರವಣಿಗೆಯಲ್ಲಿ ಸೇರಿದ್ದರು. ಮಹಿಳಾ ದಲಿತ ವಿದ್ಯಾರ್ಥಿ ಕೂಟ, ಭಾರತೀಯ ವಿದ್ಯಾರ್ಥಿ ಪರಿಷತ್ತು [ನಗರ ಶಾಖೆ] ಮತ್ತು ನಗರದ ಅನೇಕ ಪ್ರಮುಖ ಕೈಗಾರಿಕಾ ಸಂಸ್ಥೆಗಳ ಹರಿಜನ, ಗಿರಿಜನ ಸಂಘ ಸಂಸ್ಥೆಗಳು ತಮ್ಮ ತಮ್ಮ 'ಬ್ಯಾನರ್' ಸಹಿತ ಪಾಲ್ಗೊಂಡಿದ್ದವು. ಸಂಘಟಿತ ಶಿಸ್ತಿನ ಆಕ್ರೋಶ ಪ್ರತಿಭಟನೆ ಬೆಂಗಳೂರು ಜನತೆಯನ್ನು ದಂಗುಬಡಿಸಿತು.

[ ಎರಡನೆಯ ಪುಟಕ್ಕೆ ]

# ಬಡ ಗೇಣಿದಾರರಿಗೆ ಅನ್ಯಾಯ: ಎಂಎಲ್ಎ ಬೆಂಬಲ

ನಂಜನಗೂಡು ತಾ. ನಗರ್ಲೆಯಲ್ಲಿ ೧೬. ೭. ೭೭ ರ ರಾತ್ರಿ ರಂಗನಾಯಕನ ಕುಟುಂಬವನ್ನು ಅರೆಸ್ಟ್ ಮಾಡಿ ಲಾಕಪ್ಪಿನಲ್ಲಿಟ್ಟು, ಆತ ಗುತ್ತಿಗೆ ಮಾಡುತ್ತಿದ್ದ ಜಮೀನಿನಲ್ಲಿ ಬೆಳೆದಿದ್ದ ರಾಗಿ, ಹಲಸಂದೆ ಬೆಳೆಯನು ಕೊಯ್ದುಕೊಂಡು, ೨೦ ವರ್ಷಗಳಿಂದಲೂ ಜಮೀನಿನಲ್ಲೇ ಕಟ್ಟಿಕೊಂಡಿದ್ದ ಗುಡಿಸಿಲಿಗೂ ಬೆಂಕಿ ಹಾಕಿ ಸುಟ್ಟಿರುವ ಘಟನೆಯೊಂದು ವರದಿಯಾಗಿದ್ದು ಇದೆಲ್ಲವನ್ನೂ ಸ್ಥಳೀಯ ಪೋಲೀಸ್ ಇನ್‌ಸ್ಪೆಕ್ಟರ್ ಮತ್ತು ಎನ್. ಎಸ್. ಗುರುಸಿದ್ದಪ್ಪ [ ಎಂ. ಎಲ್. ಎ. ಮತ್ತು ಭೂ ನ್ಯಾಯ ಮಂಡಳಿ ಸದಸ್ಯ ] ಇಬ್ಬರು ತಾವೇ ಮುಂದೆ ನಿಂತು ಮಾಡಿಸಿದ್ದಾರೆಂದೂ ಗೊತ್ತಾಗಿದೆ.

ರಂಗನಾಯಕ ಸವರ್ಣೀಯ ಗೌತಮನ ೧ಎಕರೆ ೫ ಗುಂಟೆ ಜಮೀನನ್ನು ೨೦ ವರ್ಷಗಳಿಂದಲೂ ಗುತ್ತಿಗೆ ಮಾಡುತ್ತಿದ್ದ. ಜಮೀನ್ದಾರನಾದ ಗೌತಮ ತನ್ನ ಅಣ್ಣನಾದ ಗುರುಸಿದ್ದಪ್ಪನ ಬೆಂಬಲದಿಂದ ಎರಡು ವರ್ಷಗಳ ಹಿಂದೆ ತನ್ನ ಜಮೀನನ್ನು ರಂಗನಾಯಕನಿಂದ ಬಿಡಿಸಿಕೊಳ್ಳಲು ಇನ್‌ಜಂಕ್ಷನ್ ಆರ್ಡರ್ ತಂದಿದ್ದ. ಈ ಸಮಯಕ್ಕೆ ಸರಿಯಾಗಿ ತುರ್ತು ಪರಿಸ್ಥಿತಿ ಬಂದು ಭೂ ಸುಧಾರಣೆ ಕುರಿತ ಸುಗ್ರೀವಾಜ್ಞೆ ಹೊರಟಿತು. ಇದರಿಂದ ಗೌತಮನು ತೆಪ್ಪಗಾಗಬೇಕಾಯಿತು. ಮತ್ತು ತುರ್ತು ಪರಿಸ್ಥಿತಿ ಅವಧಿಯಲ್ಲಿ ಜಮೀನಿನ ಬಗ್ಗೆ ಯಾವ ತಕರಾರೂ ನಡೆಯಲಿಲ್ಲ.

ಈಗ ಚುನಾವಣೆ ನಡೆದು ತುರ್ತುಪರಿಸ್ಥಿತಿ ಇಲ್ಲವಾಗಿ ಗೌತಮ ಮತ್ತೆ ತನ್ನ ಬಾಲ ಬಿಚ್ಚಿದನಲ್ಲದೆ ಹಿಂದಿನ ಇಂಜಕ್ಷನ್ ಆರ್ಡರ್‌ನೇ ತೆಗೆದುಕೊಂಡು ಪೋಲೀಸ್

[ ಕೊನೆಯ ಪುಟಕ್ಕೆ ]

### ಜೈಲಿನಲ್ಲೂ ೧೮ ಪರ್ಸೆಂಟ್

ಇತ್ತೀಚೆಗೆ ಹರಿಜನ ಶಾಸಕರೊಬ್ಬರು ಆರೋಗ್ಯ ಸಚಿವ ಎಚ್. ಎಂ. ಚನ್ನಬಸಪ್ಪನವರನ್ನು ಭೇಟಿ ಮಾಡಿ ಸರ್ಕಾರದ ಎಲ್ಲಾ ಇಲಾಖೆಗಳಲ್ಲೂ ಹರಿಜನ ಗಿರಿಜನರಿಗೆ ಶೇ. ೧೮ ಉದ್ಯೋಗವನ್ನು ಮೀಸಲು ಸ್ಥಾನವನ್ನು ತುಂಬಬೇಕೆಂದು ಸಮಾಲೋಚಿಸುತ್ತಿದ್ದಾಗ ಮಾನ್ಯ ಚನ್ನಬಸಪ್ಪನವರು, "ನಿಮ್ಗೆ ಜೈಲಿನಲ್ಲೂ ಶೇ. ೧೮ ಮೀಸಲು ಕೊಡಬೇಕು" ಎಂದು ಉತ್ತರಿಸಿದರಂತೆ.

# ಸೆಲೆಕ್ಟ್ ಆದರೂ ಸಿಕ್ಕದ ಕೆ. ಎಸ್. ಆರ್. ಟಿ. ಸಿ. ಹುದ್ದೆ

ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಹೆಲ್ಪರ್ "ಬಿ" ಹುದ್ದೆಗೆ ಆಯ್ಕೆಯಾದದ್ದು 1972ರಲ್ಲಿ. ಈಗ 1977 ಐದು ವರ್ಷವಾದರೂ ಇನ್ನೂ ಆರ್ಡರ್ ಬಂದಿಲ್ಲ "ಪೋಲೀಸ್ ಇಲಾಖೆಯಿಂದ ತಂದೆ ರಿಟೈರ್ಡ್ ಆದ ಮೇಲೆ ಇಡೀ ಸಂಸಾರದ ಭಾರ ಹೊತ್ತ ನನಗೆ ದಾರಿಯೇ ಕಾಣುತ್ತಿಲ್ಲ".

ತಾನು ಹಿಂದುಳಿದವನಾಗಿ ಅನ್ಯಾಯದ ಬಗ್ಗೆ ಗಟ್ಟಿ ಮಾತಾಡಿದ ತಪ್ಪಿಗಾಗಿ ಮೈಸೂರು ಗಾಂಧಿನಗರದ ಶ್ರೀ ಕುಮಾರ್ ಅನುಭವಿಸುತ್ತಿರುವ ಶಿಕ್ಷೆ ಇದು.

ಎಸ್. ಎಸ್. ಎಲ್. ಸಿ. ಪಾಸುಮಾಡಿ ಐ. ಟಿ. ಐ ಟ್ರೈನಿಂಗ್ ಮುಗಿಸಿದ ಕುಮಾರ್‌ಗೆ 1972ಕ್ಕೆ ಮೊದಲು ಒಂದು ಖಾಸಗಿ ಸಂಸ್ಥೆಯಲ್ಲಿ ಟರ್ನರ್ ಆಗಿ ಕೆಲಸ. ಈ ಮಧ್ಯೆ 18. 8. 1972ರಲ್ಲಿ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಹೆಲ್ಪರ್ "ಬಿ" ಹುದ್ದೆಗೆ ಸೆಲೆಕ್ಟ್ ಆದ್ದರಿಂದ ಖುಸಿಗೊಂಡು ಮೊದಲಿನ ಖಾಸಗಿ ಸಂಸ್ಥೆಯ ಕೆಲಸಕ್ಕೆ ರಾಜಿನಾಮೆ ಇತ್ತರು. ಈ ನಂತರ ಸೆಲೆಕ್ಟ್ ಆದ ಹುದ್ದೆಯ ಆರ್ಡರ್‌ಗಾಗಿ ಮೈಸೂರು ಕೆ. ಎಸ್. ಆರ್. ಟಿ. ಸಿ ಆಫೀಸಿಗೆ ಶುರುವಾದ ಅಲೆತ ಇನ್ನೂ ನಿಂತಿಲ್ಲ. ಮೇಲಿನ ಅಧಿಕಾರಿಗಳಿಂದ, ಕಾಂಗ್ರೆಸ್ ಮಂತ್ರಿಗಳಿಂದ 'ಇನ್‌ಪ್ಲೂಯೆನ್ಸ್' ಮಾಡಿಸಿ, ಕೇಂದ್ರದ ಮಂತ್ರಿಗಳಿಗೂ ಬರೆದು ಆಗಿದೆ. ಆದರೆ ಇನ್ನೂ ಆರ್ಡರ್ ಮಾತ್ರ ಸಿಕ್ಕಿಲ್ಲ. ಬವಣೆ ತಪ್ಪಿಲ್ಲ.

### ದಲಿತನ "ತಪ್ಪು"

ಇಷ್ಟಕ್ಕೆಲ್ಲ ದಲಿತ ಎಸ್. ಎನ್. ಕುಮಾರ್ ಮಾಡಿದ ತಪ್ಪು ಇಷ್ಟು : 1972 ರಲ್ಲಿ ಹೆಲ್ಪರ್ "ಬಿ" ಹುದ್ದೆಗೆ ಸೆಲೆಕ್ಟ್ ಆದ 120 ಜನರಲ್ಲಿ ಕುಮಾರ್ 74ನೆಯವರು. ಲಂಚ ಕೊಡದ ತಪ್ಪಿಗೆ ಇವರ ಕ್ರಮ ಸಂಖ್ಯೆ 17 ಇದ್ದದ್ದು 74 ಆಗಿತ್ತು. ಆದರೂ ಕ್ರಮವಾಗಿ ಸಿಕ್ಕ ಬೇಕಾದ ಆರ್ಡರ್ ಎರಡು ವರ್ಷ, ಮೂರು ವರ್ಷ ಕಳೆದರೂ ಸಿಕ್ಕಲಿಲ್ಲ. ಈ ಸಮಯಕ್ಕೆ ಮೈಸೂರು ವಿಭಾಗದ ಡಿವಿಜನಲ್ ಕಂಟ್ರೋಲರ್ ಆಗಿ ಬಂದ ಶ್ರೀ ಎ. ಎಸ್. ಸಲಗಾರ್ ಅವರು ತಮಗೆ ತೋಚಿದವರಿಗೆ ಆರ್ಡರ್ ಕೊಡುತ್ತಾ ಹೋದರು. ಇದು ಏಕೆಂದು ಕೇಳಿದ ಕುಮಾರ್ ಅವರಿಗೆ ಸಿಕ್ಕಿದ ಉತ್ತರ ಹೀನಾಯವಾದ ಬೈಗಳು. ಹರಿಜನ–ಗಿರಿಜನರನ್ನು ಕಂಡರೇ ಆಗದ ಶ್ರೀ ಸಲಗಾರ್ ಅವರ ಆರ್ಡರ್ ಈಗ ಕೊಡುತ್ತೇನೆ, ಆಮೇಲೆ ಕೊಡುತ್ತೇನೆ, ನಂತರ ಬಾ ಎಂದು ವರ್ಷ ಗಟ್ಟಲೆ ಸತಾಯಿಸಿದರು. ವರ್ಷದ ನಂತರ 'ನನಗೆ ಗೊತ್ತಿಲ್ಲ' ಎಂದು ಸುಮ್ಮನಾದರು. ನಂತರ ಈ ವಿಷಯವನ್ನು ಬೆಂಗಳೂರಿನ ಜನರಲ್ ಮ್ಯಾನೇಜರ್ ಅವರಿಗೆ ತಿಳಿಸಲಾಗಿ ಅವರು ಆರ್ಡರ್ ಕೊಡುವಂತೆ ಶ್ರೀ ಸಲಗಾರ್ ಅವರಿಗೆ ತಿಳಿಸಿದರು. ಆದರೂ ಆರ್ಡರ್ ಕೊಡಲಿಲ್ಲ. ಇದಾದನಂತರ 21. 10. 76 ರಂದು ಜನರಲ್ ಮ್ಯಾನೇಜರ್ ಅವರು ಒಂದು ಪತ್ರ ಬರೆದು ನಿಮಗೆ ತಕ್ಷಣ ಆರ್ಡರ್ ಕೊಡುತ್ತೇವೆ ಎಂದು ತಿಳಿಸಿದರು. ಈ ಬಗ್ಗೆ ಮೈಸೂರಿನ ಡಿವಿಜನಲ್ ಕಂಟ್ರೋಲರ್ ಆಫೀಸಿನಲ್ಲಿ ವಿಚಾರಿಸಿದರೆ ಬೆಂಗಳೂರಿನಲ್ಲಿ ವಿಚಾರಿಸೆಂದೂ ಬೆಂಗಳೂರಿನಲ್ಲಿ ವಿಚಾರಿಸಿದರೆ ಮೈಸೂರಿನಲ್ಲಿ ಕೇಳಿ ಎಂದೂ–

ಹೀಗೆ ಕೇವಲ ಸೆಲೆಕ್ಟ್ ಆದ ಹುದ್ದೆಯ ಆರ್ಡರ್‌ಗಾಗಿ ಸತತವಾಗಿ ಐದು ವರ್ಷಗಳು ಸುತ್ತಿ ಬೇಸತ್ತ ಎಸ್. ಎನ್. ಕುಮಾರ್ ಅವರು ಈಗ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ಆಡಳಿತ ವರ್ಗದಿಂದ ಆಗಿರುವ ಈ ಅನ್ಯಾಯಕ್ಕೆ ಉಗ್ರ ಪ್ರತಿಭಟನೆಯನ್ನು ಸಂಘಟಿಸುವ ಯೋಚನೆಯಲ್ಲಿದ್ದಾರೆ. [illegible] ದಲಿತ ಸಂಘ ಸಂಸ್ಥೆಗಳಲ್ಲಿ ಈ ಅನ್ಯಾಯದ ಬಗ್ಗೆ ಮನವಿ ಮಾಡಿಕೊಂಡಿದ್ದಾರೆ.

## ಪೊರೆಕಳಚದ ಹಾವುಗಳು

ಸದಾ ನಿಮ್ಮ ಬೆವರಿಗೆ ಬಾಯಿ ತೆರೆಕೊಂಡು
ಬಿದ್ದಿರುವ ಈ ಬಂಜೆ ನೆಲ
ಹೆತ್ತ ಮಕ್ಕಳ ನುಂಗಿ ಹೆರವರಿಗೆಲ್ಲಾ
ಮೈ ಬಿಚ್ಚಿಕೊಳ್ಳುವುದ ಕಾಣದ
ಕುರುಡರೇ ––
ಸಮಸ್ತ ಜಂಬೂ ದ್ವೀಪದ
ಹೆಣಬಾರ ಹೆಗಲೇರಿದ್ದರೂ
ಕಮಕ್ ಕಿಮಕ್ ಅನ್ನದ ನಿಮ್ಮ
ಸಾಚಾ ತನಕ್ಕೆ ಹೊಸಿಲಾಚೆ,
ಊರಾಚೆಗಿಟ್ಟ ತಾಯ್ಗುಂಡತನಕ್ಕೆ
ಸವಾಲಾಗಲಾರಿರಾ ?

ಎಂಥ ತುಳಿತಕ್ಕೂ ಕೆರಳಿ ಹೆಡೆ ಬಿಚ್ಚದ,
ಉಳ್ಳವರ ಪುಂಗಿಯ ನಕಲಿ ನಾದಕ್ಕೆ
ತಲೆದೂಗುವ ನಿಮ್ಮ ಮುಗ್ಧತೆಗೆ
ಕಿಚ್ಚಿಕ್ಕಿ ಕಳಚದ ಶತ ಶತಮಾನಗಳ
ಪಂಡ ಪೊರೆಗಳ ಕಚ್ಚಿ ಬಿಚ್ಚಿಸಿ
ಬುಸುಗುಡಿಸಿ ವಿಷಕಾರಿಸುತ್ತೇವೆ
ಈ ಬಂಜೆ ನೆಲದಲ್ಲೂ ನಿಮ್ಮರಿವಿನ
ಝಂಡಾ ಗಟ್ಟಿ ಊರಿಸುತ್ತೇವೆ.
ಹುದುಗಿ ಹೋದ ದನಿಗಳ
ಗುಡುಗಾಗಿಸಿ ಮಿಂಚಾಗಿಸಿ
ಸಮೃದ್ಧ ಮಳೆಗೆರೆಸುತ್ತೇವೆ.

— ಕೆ. ರಾಮಯ್ಯ.

## ಶೋಷಣೆಯ ವಿರುದ್ಧ ಸಹಸ್ರ ದಲಿತರ ಮೆರವಣಿಗೆ

( ಮೊದಲ ಪುಟದಿಂದ)

ಬೆಂಗಳೂರು ಜನತೆಯನ್ನು ದಂಗುಬಡಿಸಿತು.

ಫರ್ಲಾಂಗುಗಟ್ಟಲೆ ಬೆಳೆದಿದ್ದ ಮೆರವಣಿಗೆ ಮೊದಲು ಶಿವಾಜಿ ನಗರದ ಕಾರ್ಪೊರೇಷನ್ ಸ್ಟೇಡಿಯಂನಿಂದ ಹೊರಟು ಕಸ್ತೂರಬಾ ರಸ್ತೆ, ಕಾರ್ಪೊರೇಷನ್ ವೃತ್ತ, ಅರಮನೆ ರಸ್ತೆ ಮಾರ್ಗವಾಗಿ ಮುಖ್ಯಮಂತ್ರಿ ಮತ್ತು ರಾಜ್ಯಪಾಲರ ನಿವಾಸಕ್ಕೆ ತೆರಳಿತು.

"ಬಂಡವಾಳಶಾಹಿಗೆ ಧಿಕ್ಕಾರ", "ದಲಿತ ವಿರೋಧಿ ಸರ್ಕಾರಕ್ಕೆ ಧಿಕ್ಕಾರ", "ಜಮೀನ್ದಾರಿ ಪದ್ಧತಿಗೆ ಧಿಕ್ಕಾರ" "ಡೌನ್ ಡೌನ್ ಹರಾಸ್ಮೆಂಟ್", ವಿ ವಾಂಟ್ ಜಸ್ಟೀಸ್" "ಅಂಬೆಡ್ಕರ್ ಲಾಂಗ್ ಲಿವ್ ಜಿಂದಾಬಾದ್' 'ಶೇ. 22 ಮೀಸಲಾತಿ ಜಾರಿಯಾಗಲಿ' ಮತ್ತು 'ಸಂವಿಧಾನ ಬದ್ಧ ಹಕ್ಕುಗಳು ಕೂಡಲೆ ಜಾರಿಗೊಳಿಸಿ' ಎಂಬ ನೂರಾರು ಫಲಕಗಳು, ಘೋಷಣೆಗಳು ನ್ಯಾಯಕ್ಕಾಗಿ ಆಗ್ರಹಪಡಿಸುವುದರ ಮೂಲಕ ಧಗ ಧಗಿಸುತ್ತಿದ್ದ ಉರಿ ಬಿಸಿಲನ್ನು ಲೆಕ್ಕಿಸದೆ ದಾರಿಯುದ್ದಕ್ಕೂ ತಮ್ಮ ಮೇಲಿನ ಎಲ್ಲಾ ರೀತಿಯ ಅನ್ಯಾಯಗಳ ವಿರುದ್ಧದ ರೊಚ್ಚು ಕಿಚ್ಚಿನ ಕೂಗುಗಳು ಕಿವಿಗಡಚಿಕ್ಕುತ್ತಾ, ಮೆರವಣಿಗೆಯು ಮುಖ್ಯಮಂತ್ರಿಗಳ ನಿವಾಸಕ್ಕೆ ತೆರಳಿತು. ಪ್ರಸಕ್ತ ರಾಜಕೀಯದ ಗೊಂದಲದಲ್ಲಿ ಮುಖ್ಯಮಂತ್ರಿಗಳು ದೆಹಲಿಗೆ ಹಾರಿದ್ದ ಕಾರಣ, ಕ್ರಿಯಾ ಸಮಿತಿಯ ನಿಯೋಗವೊಂದು ಮುಖ್ಯಮಂತ್ರಿಗಳ ಆಪ್ತ ಕಾರ್ಯದರ್ಶಿಯವರನ್ನು ಭೇಟಿಮಾಡಿ ಹದಿನಾಲ್ಕು ಪ್ರಮುಖ ಅಂಶಗಳ ಲಿಖಿತ ಬೇಡಿಕೆಯೊಂದನ್ನು ಅರ್ಪಿಸಿ ಬೇಡಿಕೆಗಳನ್ನು ಕೂಡಲೆ ಜಾರಿಗೊಳಿಸಲು ಆಗ್ರಹ ಪಡಿಸಿತು.

ನಿವಾಸದ ಆವರಣದಲ್ಲಿ ಸೇರಿದ್ದ ಮೆರವಣಿಗೆಯ ಸಾಮೂಹಿಕ ಸಭೆಯಲ್ಲಿ "ರಾಜಕೀಯದ ಗಡಿಬಿಡಿಯೊಳಗೆ, ಆಕಾಶದ್ಮೇಲೆ ಡೆಲ್ಲಿಗೂ ಬೆಂಗ್ಳೂರಿಗೂ ಓಡಾಡೋ ನಾಯಕ್ರ ನಿಮ್ಗೆ ಕೇಳ್ಸಲ್ವೇನ್ರೀಲೇ ನಮ್ಮ ಕೂಳಿಲ್ಲದ ಕೂಗು" ಎಂಬ ಸಿದ್ದಲಿಂಗಯ್ಯನವರ ಹೊಲೆ ಮಾದಿಗರ ಹಾಡೊಂದು ಧ್ವನಿವರ್ಧಕದ ಮೂಲಕ ತನ್ನ ಸಂಘಟಿತ ಪ್ರತಿಭಟನೆಯನ್ನು ವ್ಯಕ್ತಪಡಿಸಿತು.

ಮೆರವಣಿಗೆಯು ಮುಂದೆ ರಾಜಭವನಕ್ಕೆ ತೆರಳಿ ರಾಜ್ಯಪಾಲರನ್ನು ಭೇಟಿ ಮಾಡಿ ಬೇಡಿಕೆಗಳನ್ನು ಸಲ್ಲಿಸಿದ ನಂತರ ರಾಜಭವನದ ಆವರಣದಲ್ಲಿ ಸೇರಿದ್ದ ಸಭೆಯನ್ನು ಉದ್ದೇಶಿಸಿ ಕ್ರಿಯಾಸಮಿತಿಯ ಕಾರ್ಯಕರ್ತರುಗಳಾದ ತಿಮ್ಮರಾಯಪ್ಪ ಮತ್ತು ಸಿದ್ಧಲಿಂಗಯ್ಯ ಅವರುಗಳು ಮಾತನಾಡಿದರು. ಸಹಸ್ರಾರು ವರ್ಷಗಳಿಂದ ಸಾಮಾಜಿಕ, ಆರ್ಥಿಕ ಶೋಷಣೆಯ ಕ್ರೂರ ದಬ್ಬಾಳಿಕೆಗೆ ತುತ್ತಾಗಿ ಮೂಕ ವೇದನೆಯನ್ನು ಅನುಭವಿಸುತ್ತಿರುವ ನಾವು ನಮ್ಮ ಎಲ್ಲಾ ದಾಸ್ಯ ಸಂಕೋಲೆಗಳಿಂದ ಬಿಡುಗಡೆಯಾಗಲು ನಮ್ಮ ಮುಚ್ಚಿರುವ ಬಾಯಿ, ಕೈಗಳನ್ನು ತೆರೆದು ನ್ಯಾಯಕ್ಕಾಗಿ, ಉಳಿವಿಗಾಗಿ ಜೋರಾಗಿ ಕೂಗಬೇಕಾಗಿರುವುದು ಹಿಂದೆಂದಿಗಿಂತಲೂ ಇಂದು ಅವಶ್ಯ. ಅದು ಇಂತಹ ಸಂಘಟಿತ ಹೋರಾಟದಿಂದ ಮಾತ್ರ ಸಾಧ್ಯವೆಂದು ಶ್ರೀ ಸಿದ್ದಲಿಂಗಯ್ಯ ನುಡಿದರು.

ನಮ್ಮ ಬೇಡಿಕೆಗಳು ಹಿಡೇರದೆ, ಸೂಕ್ತ ನ್ಯಾಯ ದೊರಕದಿದ್ದರೆ ಕೂಡಲೆ ರಾಜ್ಯಾದ್ಯಂತ ಇಂತಹ ಸಂಘಟಿತ ಚಳುವಳಿಯನ್ನು ನಡೆಸುವುದಾಗಿ ಮತ್ತು ನಮ್ಮ ನೂರಾರು ಸಮಸ್ಯೆ, ಇತ್ಯಾದಿ ಪ್ರಕರಣಗಳ ಬಗ್ಗೆ ಮೌನತಾಳಿರುವ ಹರಿಜನ ಮಂತ್ರಿಗಳು ಇನ್ನಾದರೂ ಸಕಾಲದಲ್ಲಿ ಸೂಕ್ತ ಕ್ರಮಗಳನ್ನು ಕೈಗೊಳ್ಳಲು ಹಿಂದೆಜ್ಜೆ ಹಾಕಿದರೆ ಅವರ ವಿರುದ್ಧವೂ ನಾವು ಚಳುವಳಿ ಮಾಡುವುದಾಗಿ ಶ್ರೀ ತಿಮ್ಮರಾಯಪ್ಪ ನುಡಿದರು.

# ಶೋಷಕನನ್ನು ಸೋಲಿಸಿದ ಸಂಘಟಿತ ಹೋರಾಟ

ಎರಡು ದಶಕಗಳಿಂದಲೂ ಪ್ರಾಥಮಿಕ ಶಾಲಾ ನಿವೇಶನವನ್ನು ತನ್ನದೆಂದು ಹೇಳಿಕೊಳ್ಳುತ್ತಾ, ಸರ್ಕಾರದ ಕಾನೂನನ್ನೂ ಧಿಕ್ಕರಿಸಿ ತಕರಾರು ಮಾಡುತ್ತಿದ್ದ ಹಣವುಳ್ಳ ಕಾಳೀರಯ್ಯ ಎಂಬುವನ ವಿರುದ್ಧ ಕ್ರಮ ಕೈಗೊಳ್ಳಬೇಕೆಂದು, ಮತ್ತು ಆತನ ವಶದಲ್ಲಿರುವ ಶಾಲೆಗೆ ಸೂಕ್ತವಾದ ೫೬೫.೪ ಎ ನಿವೇಶನವೇ ಬೇಕೆಂದು ಸರ್ಕಾರವನ್ನು ಒತ್ತಾಯಿಸಲು ಮಳವಳ್ಳಿಯ ದಲಿತ ವಿದ್ಯಾರ್ಥಿ ಕೂಟದ ಗೆಳೆಯರು ಜೂನ್ ೧೨ನೇ ತಾರೀಖಿನಿಂದ ಬೆಂಗಳೂರಿನ ವಿಧಾನ ಸೌದದ ಮುಂದೆ ಉಪವಾಸ ಸತ್ಯಾಗ್ರಹವನ್ನು ಆರಂಭಿಸಿ ಅನ್ಯಾಯದ ವಿರುದ್ಧದ ಹೋರಾಟದಲ್ಲಿ ಜಯ ಗಳಿಸಿದ್ದಾರೆ.

ಈ ನಿವೇಶನದ ಹೋರಾಟದ ಹಿನ್ನೆಲೆ ಹೀಗಿದೆ. ರಾಜ್ಯದ ಪ್ರಥಮ ಹರಿಜನ ಪ್ರಾಥಮಿಕ ಶಾಲೆಯು ೧೮೯೯ರಲ್ಲಿ ಮಳವಳ್ಳಿಯಲ್ಲಿ ಪ್ರಾರಂಭಗೊಂಡಿತು. ಇದಕ್ಕೊಂದು ಸ್ವಂತ ಕಟ್ಟಡವಿಲ್ಲದೆ, ಸರ್ಕಾರದ ಬೇರೊಂದು ಶಾಲಾ ಕಟ್ಟಡದ ಆಶ್ರಯದಲ್ಲಿ ಗೊತ್ತಾದ ಅಲ್ಪ ವೇಳೆಯಲ್ಲಿ (ಬೆಳಗ್ಗೆ ೭–೩೦ ರಿಂದ ೧೧ ಗಂಟೆಯವರೆಗೆ) ತರಾತುರಿಯಲ್ಲಿ ತರಗತಿಗಳು ನಡೆಯುತ್ತಿದ್ದವು.

ಮಳವಳ್ಳಿಯ ಮೂರು ಹರಿಜನ ಬಡಾವಣೆಗಳಿಗೂ ಕೇಂದ್ರವಾಗಿರುವ ನಿವೇಶನವೊಂದನ್ನು ಎಲ್ಲಾ ಹರಿಜನರ ಇಚ್ಛೆಯ ಮೇರೆಗೆ ೧೯೩೬ರಲ್ಲಿ ಸರ್ವೆ ನಂ. ೫೬೫ - ೪ ನಿವೇಶನವನ್ನು ಗೊತ್ತುಪಡಿಸಿ ೧೯೪೯ರಲ್ಲಿ ಸರ್ಕಾರ ಶಾಲೆಗಾಗಿ ಅದನ್ನು ಸ್ವಾಧೀನಪಡಿಸಿಕೊಂಡಿತಾದರೂ ಈ ನಿವೇಶನವನ್ನು ಹೊಂದಿದ್ದ ಮುಗ್ಧ ಹರಿಜನನೊಬ್ಬನಿಗೆ ನಾನಾ ಆಮಿಷ ತೋರಿಸಿ ಕಡಿಮೆ ಹಣದಲ್ಲಿ ಮಳವಳ್ಳಿಯವನೇ ಆದ ಸವರ್ಣೀಯ ಕಾಳೀರಯ್ಯ ೧೯೫೯ರಲ್ಲಿ ಅಕ್ರಮವಾಗಿ ಕ್ರಯ ಮಾಡಿಕೊಂಡನು. ಇದರಿಂದ ಹರಿಜನರು ಜಿಲ್ಲಾಧಿಕಾರಿ ನ್ಯಾಯಾಲಯದಲ್ಲಿ ನ್ಯಾಯ ಕೇಳಿದರು. ಈ ನಡುವೆ ಶಿಕ್ಷಣ ಇಲಾಖೆಯ ವ್ಯಾಪ್ತಿಗೆ ಸೇರಿದ್ದ ಈ ನಿವೇಶನವನ್ನು ಶಾಲೆಗೆ ಸೂಕ್ತ ಸ್ಥಳವೆಂದು ಶಿಕ್ಷಣ ಇಲಾಖೆ ಜಿಲ್ಲಾಧಿಕಾರಿಗಳಿಗೆ ಶಿಫಾರಸು ಮಾಡಿತು. ಜಿಲ್ಲಾಧಿಕಾರಿ ನ್ಯಾಯಾಲಯ ನಿವೇಶನ ಶಾಲೆಗೆ ಯೋಗ್ಯವೆಂದು ೧೯೬೭ರಲ್ಲಿ ತೀರ್ಪು ನೀಡಿತು. ಜಿಲ್ಲಾಧಿಕಾರಿಗಳ ನ್ಯಾಯವನ್ನು ಧಿಕ್ಕರಿಸಿದ ಕಾಳೀರಯ್ಯ ರೆವಿನ್ಯೂ ಟ್ರಿಬ್ಯೂನಲ್‌ಗೆ ೧೯೭೧ರಲ್ಲಿ ಆಪೀಲು ಹೋದ. ಅಲ್ಲಿಯೂ ಜಿಲ್ಲಾಧಿಕಾರಿಗಳ ತೀರ್ಪನ್ನೇ ಎತ್ತಿ ಹಿಡಿಯಲಾಯಿತು. ಈ ನಡುವೆ ಕಾಳೀರಯ್ಯ ಪುರಸಭೆಯ ಅಧ್ಯಕ್ಷನಾದ. ಮತ್ತು ಪುರಸಭಾ ಸದಸ್ಯರ ಬೆಂಬಲದಿಂದ ಲೈಸೆನ್ಸ್ ಪಡೆದು (ಗೃಹ ಕೈಗಾರಿಕಾ ಹೆಸರಿನಲ್ಲಿ) ಅಕ್ರಮವಾಗಿ ಕಾಂಪೌಂಡ್ ಕಟ್ಟಲು ೧೯೭೨ರಲ್ಲಿ ಶುರು ಮಾಡಿದ. ಹರಿಜನರೆಲ್ಲರೂ ಕಾಂಪೌಂಡು ಕಟ್ಟದ ಹಾಗೆ ತಡೆದರು. ಇದರಿಂದ ಕುಪಿತಗೊಂಡ ಕಾಳೀರಯ್ಯ ತನ್ನ ಕಡೆಯ ಜನಗಳಿಂದ ಹರಿಜನರ ಮೇಲೆ ಹಲ್ಲೆ ನಡೆಸಿದ್ದಲ್ಲದೆ, ಪೋಲೀಸ್ ಬೆಂಬಲದಿಂದ ಈಗ ನಿವೇಶನದಲ್ಲಿ ಹಗಲು ರಾತ್ರಿ ಎನ್ನದೆ ನೂರಾರು ಆಳುಗಳಿಂದ ಕೇವಲ ಮೂರೇ ದಿನಗಳಲ್ಲಿ ಆಳೆತ್ತರಕ್ಕೂ ಮೇಲ್ಪಟ್ಟ ಕಾಂಪೌಂಡ್ ಮತ್ತು ಸಾಲು ಮನೆಯೊಂದನ್ನು ಕಟ್ಟಿಸಿದ.

ಈ ಸಂಬಂಧ ಹರಿಜನರ ರಕ್ಷಣೆಗೆ ಬೇಟಿನೀಡಿದ್ದ ಅಂದಿನ ಪೌರಾಡಳಿತ ಸಚಿವರು ಕಾಳೀರಯ್ಯನ ವಿರುದ್ಧ ಆಜ್ಞೆ ಜಾರಿಗೊಳಿಸಿದರು. ಸಚಿವರ ಆಜ್ಞೆ ವಿರುದ್ಧ. ಮತ್ತು ಜಿಲ್ಲಾಧಿಕಾರಿ ಮತ್ತು ರೆವಿನ್ಯೂ ಟ್ರಿಬ್ಯೂನಲ್ ತೀರ್ಪನ್ನು ಧಿಕ್ಕರಿಸಿ ಕಾಳೀರಯ್ಯ ಉನ್ನತ ನ್ಯಾಯಾಲಯಕ್ಕೆ ಅಪೀಲು ಹೋದ. ಸಚಿವರ ಆಜ್ಞೆ ವಿರುದ್ಧ ಇವನ ಅಪೀಲು ನ್ಯಾಯಾಲಯದಲ್ಲಿ ತಿರಸ್ಕೃತಗೊಂಡಿತು. ಮತ್ತು ರೆವಿನ್ಯೂ ಟ್ರಿಬ್ಯೂನಲ್ ತೀರ್ಪನ್ನು ಎತ್ತಿ ಹಿಡಿದ ಸರ್ಕಾರ ಕಾಳೀರಯ್ಯನ ವಿರುದ್ಧವಾಗಿ ಅಡ್ವಕೇಟ್ ಜನರಲ್ ಒಬ್ಬರನ್ನು ನ್ಯಾಯಾಲಯದಲ್ಲಿ ವಾದಿಸಲು ನೇಮಿಸಿತ್ತು. ಹೈಕೋರ್ಟ್‌ನಲ್ಲೂ ಹರಿಜನರತ್ತ ತೀರ್ಪು ವಾಲುತ್ತಿದ್ದುದನ್ನು ಗಮನಿಸಿದ ಕಾಳೀರಯ್ಯ ತನ್ನ ಕೇಸನ್ನು ಹಿಂತೆಗೆದುಕೊಂಡನು. ಈ ಹಂತದಲ್ಲಿ ನಿವೇಶನದ ತೀರ್ಪು ಸರ್ಕಾರದ ಮುಂದೆ ಬಂದಿತು. ಶಾಲೆಗೆ ಸೂಕ್ತ ನಿವೇಶನವೆಂದು ಶಿಕ್ಷಣ ಸಚಿವರು ಶಿಪಾರ್ಸು ಮಾಡಿದರು. ಮುಂದೆ ನಿವೇಶನದ ತೀರ್ಪನ್ನು ಕಂದಾಯ ಇಲಾಖೆಗೆ ವಹಿಸಿದರು. ತಾ. ೧೬.೫.೭೭ ರಂದು ಕಂದಾಯ ಸಚಿವರು ಮಳವಳ್ಳಿಗೆ ಬೇಟಿ ನೀಡಿ ನಿವೇಶನವನ್ನು ಪರಿಶೀಲಿಸುತ್ತಾ ಕಾಳೀರಯ್ಯನ ವಶಕ್ಕೆ ಒಪ್ಪಿಸುವ ಅವರ ಚಲನವಲನಗಳು ಹರಿಜನರಿಗೆ ಆತಂಕ ಉಂಟು ಮಾಡಿತು.

ಇದರಿಂದ ದಲಿತ ವಿದ್ಯಾರ್ಥಿಕೂಟದ ಗೆಳೆಯರು ವಿಧಾನಸಭಾ ಅಧಿವೇಶನ ಪ್ರಾರಂಭವಾದ ತಕ್ಷಣ ವಿಧಾನಸೌಧದ ಮುಂದೆ ೧೨.೬.೭೭ರಂದು ನ್ಯಾಯ ಕೇಳಿ ಉಪವಾಸ ಆರಂಭಿಸಿದರು.

ಇಪ್ಪತ್ತು ದಿನಗಳ ಸತತ ಉಪವಾಸದ ನಂತರ ಕಿಂಚಿತ್ತೂ ಅಂಜದ ದಲಿತ ಯುವಕರ ಸಂಘಟಿತ ಹೋರಾಟಕ್ಕೆ ಹೆದರಿದ ಸರ್ಕಾರ ಜುಲೈ [illegible]ನೇ ತಾರೀಖು ಇವರ ಬೇಡಿಕೆಗೆ ಒಪ್ಪಿ ಸಹಿ ಹಾಕಿತು. ತಮಗೆ ಆಗುತ್ತಿರುವ ಇಂಥ ಅನ್ಯಾಯಗಳ ವಿರುದ್ಧ ಸಂಘಟಿತ ಹೋರಾಟದ ಮಾರ್ಗ ಹಿಡಿದಿರುವ ಮಳವಳ್ಳಿ ವಿದ್ಯಾರ್ಥಿಕೂಟ ಈಗ ದಲಿತರಿಗೆ ಒಂದು ಮಾದರಿ 'ಸಂಘಟನೆ' ●

# ಕಾಡು ಕುರುಬರಿಗೆ ಒಗಟಾಗಿರುವ ಸರಕಾರಿ ಅಧಿಕಾರಿಗಳು

ಮೈಸೂರು ಜಿಲ್ಲೆ, ಹೆಗ್ಗಡದೇವನಕೋಟೆ ಬೇಗೂರಿನ ಸುತ್ತ ಮುತ್ತ ಕಾಡು ಕತ್ತರಿಸಿ ಮಾಡಿದ ಜಾಗಗಳಿವೆ. ಇಲ್ಲಿ ಇನ್ನೂ ಆದಿಮಾನವರಂತೆ ಬದುಕುವ 'ಕಾಡು ಕುರುಬರು' ಶೋಷಣೆಯ ಪೂರ್ಣ ಹಿಡಿತಕ್ಕೆ ಸಿಕ್ಕಿದ್ದಾರೆ. ಪಕ್ಕದಲ್ಲೇ ಇರುವ ದಟ್ಟವಾದ ಕಾಡು ಸರ್ಕಾರದ "ಹುಲಿ ಸಂರಕ್ಷಣಾ ಕೇಂದ್ರ"ವಾದ ಮೇಲೆ, ಇವರು ಕಾಡಲ್ಲಿ ಮರ ಕಡಿಯದಂತೆ, ಬೇಟೆಯಾಡದಂತೆ ತಡೆದದ್ದರಿಂದ ಮೊದಲಿನಿಂದಲೂ ಕಾಡಲ್ಲಿ ಹಾಯಾಗಿ ಬದುಕುತ್ತಿದ್ದ ಕಾಡುಕುರುಬರು ಈಗ ಅನಾಥರಾಗಿದ್ದಾರೆ. ಮೈಗೆ ಬಟ್ಟೆಯಿಲ್ಲದೆ ಹಂದಿಗೂಡುಗಳಂಥ ಗುಡಿಸಲುಗಳಲ್ಲಿ ಬುಟ್ಟಿ ಹೆಣೆಯುತ್ತಾ ಕೂರುವ ಈ ಜನಕ್ಕೆ ಹೊಟ್ಟೆ ತುಂಬುವ ದಿನಗಳು ಅತಿ ವಿರಳ. ಬಡವರ ಕಣ್ಣೊರೆಸುವ ಸಾಹ್ಕಾರಿ ಸರ್ಕಾರ ಈ ಕಾಡು ಕುರುಬರ "ಏಳಿಗೆ"ಯ ಬಗ್ಗೆ ಮಾಡಲು ಹೊರಟ ಒಂದೊಂದು ಕಾರ್ಯವೂ ಶೋಷಣೆಯ ಸಾಧನೆಗಳಾಗಿವೆ.

ಸುಮಾರು ವರ್ಷಗಳ ಹಿಂದೆ ಸರ್ಕಾರ ಇವರಿಗೆ ಜಮೀನು ಅಂತ ಕೊಟ್ಟಿತ್ತು. ಆ ಜಾಗಗಳಲ್ಲಿ ಈಗ ಕಾಡುಬೆಳೆದುಕೊಂಡಿದೆ ಈಗಲೂ ಪ್ರತಿವಾರ ಇನ್ಸ್‌ಪೆಕ್ಟರ್‌ಗಳು ಬಂದು, ಬಿತ್ತನೆ ಬೀಜ ಕೊಡುತ್ತೇವೆ, ಗಾಡಿಕೊಡುತ್ತೇವೆ, ವ್ಯವಸಾಯದ ಸಾಮಾನು ಕೊಡುತ್ತೇವೆ ಎಂದು ಸಹಿ ಮಾಡಿಸಿಕೊಂಡು ಹೋಗುತ್ತಾರೆ. ಆದರೆ ಅವಾವು ಬರುವುದೇ ಇಲ್ಲ. ಇವು ಆ ಜನಕ್ಕೆ ಆಶ್ಚರ್ಯದ ವಿಷಯಗಳು.

ಬೇಗೂರು ಸುತ್ತಮುತ್ತ ಬರೀ ಕಾಡುಕುರುಬರೇ ಇರುವ 20ರಿಂದ 30 ಗುಡಿಸಲುಗಳ 8 ಹಾಡಿಗಳು ಇವೆ. ಇವುಗಳಲ್ಲಿ "ಸರ್ಕಾರದವರು" ಕಟ್ಟಿಸಿದ ಒಂದಷ್ಟು ಮನೆಗಳಿವೆ. ಅವೆಲ್ಲ ಐದು ವರ್ಷ ನೆಟ್ಟಗೆ ನಿಂತರೆ ಪುಣ್ಯ. ಒಂದು ಮನೆ ಕಟ್ಟಲು 2000 ರೂಪಾಯಿ ಖರ್ಚು ಮಾಡಿದೆ ಎನ್ನುವುದು ಕಾಡು ಕುರುಬರಿಗಂತೂ ಗೊತ್ತಾಗದ ಮಾತು. 20 ಗುಡಿಸಲುಗಳಿರುವ ಕೆಂಪನ ಹಾಡಿಯಲ್ಲಿ ಮನೆ ಕಟ್ಟಲು 1972ನೇ ಇಸವಿಯಲ್ಲಿ ಕೋಟೆಯ ಒಬ್ಬ ಕಂಟ್ರಾಕ್ಟ ತೆಗೆದುಕೊಂಡ. ಗ್ರಾಂಟು ಬಂತು. ಗ್ರಾಂಟು ತೆಗೆದುಕೊಂಡ ಮೇಲೆ ಅವನ ಮುಖವೇ ಕಾಣಲಿಲ್ಲ. ಗ್ರಾಂಟಿಗಾಗಿ ಅವನು

( 6ನೇ ಪುಟಕ್ಕೆ )

# ಶೋಷಣೆಯ ವಿರುದ್ಧ ದಲಿತರ ಸಶಸ್ತ್ರ ಹೋರಾ

ಬಿಹಾರ ರಾಜ್ಯದ ಭೋಜಪುರ ಜಿಲ್ಲೆಯ ಊರುಗಳಲ್ಲಿ ಈಗ ಕತ್ತಲಾಗುತ್ತಿದ್ದಂತೆ, ಜನ ಮನೆಯಿಂದ ಹೊರಗೆ ತಲೆ ಹಾಕುವುದಿಲ್ಲ. ಬಸ್ಸುಗಳಂತು ಕತ್ತಲೆಯಲ್ಲಿ ಅಪ್ಪಿ ತಪ್ಪಿಯೂ ತಿರುಗಾಡುವುದಿಲ್ಲ. ಈ ಭಯದ ವಾತಾವರಣಕ್ಕೆ ಮುಖ್ಯ ಕಾರಣವೆಂದರೆ ಭೋಜಪುರ್ ಜಿಲ್ಲೆಯ ಹರಿಜನರು ಭೂಮಾಲೀಕರಾದ ಭೂಮಿಹಾರ್ ಮತ್ತು ರಜಪೂತರ ಶೋಷಣೆ ಮತ್ತು ದಬ್ಬಾಳಿಕೆ ವಿರುದ್ಧ ಬಂದೂಕ ಎತ್ತಿರುವುದು. ದಿನ ನಿತ್ಯ ದಲಿತರ ಮೇಲೆ ನಡೆಯುವ ಕೊಲೆ ಸುಲಿಗೆ ದಬ್ಬಾಳಿಕೆ ಕೊನೆಗೊಳ್ಳಬೇಕಾದರೆ, ಇದಕ್ಕೆ ಕಾರಣವಾದ ಜಮೀನ್ದಾರಿ ವರ್ಗವನ್ನು ಸಶಸ್ತ್ರ ಮಾರ್ಗದಿಂದ ಸಂಪೂರ್ಣ ನಾಶಗೊಳಿಸಬೇಕು, ಎನ್ನುವ ನಕ್ಸಲೀಯರು ಇಲ್ಲಿನ ಹರಿಜನ ಗಿರಿಜನರ ಹತ್ತಿರದ ಸ್ನೇಹಿತರಾಗಿರುವುದು. ಹಾಗೂ ಭೂಮಾಲೀಕರ ದಬ್ಬಾಳಿಕೆ ಬೆಳೆದಂತೆ ಈಗ ದಲಿತರೇ ಬಂದೂಕ ಧಾರಿ ನಕ್ಸಲೀಯರಾಗಿರುವುದು.

### ಗುರಿಯಿಟ್ಟ ಬಂದೂಕಗಳು

ಕಳೆದ 8 ವರ್ಷಗಳಿಂದ ಇಂಥ ಭಯದ ವಾತಾವರಣ ಭೋಜಪುರ್ ಜಿಲ್ಲೆಯ ಜೀವನದ ಒಂದು ಭಾಗವೇ ಆಗಿ ಹೋಗಿದೆ. ಕಳೆದ ಎರಡು ವರ್ಷಗಳಲ್ಲಿ 39 ಜನ ನಕ್ಸಲೀಯರು ಮತ್ತು ಒಬ್ಬ ಡಿ. ಎಸ್. ಪಿ. ಸೇರಿ 12ಜನ ಪೋಲೀಸರು ಈ ಚಳುವಳಿಯಲ್ಲಿ ಹತರಾಗಿದ್ದಾರೆ. ಇಲ್ಲಿನ ಸಾಮಾನ್ಯ ಜನರ ಅಭಿಪ್ರಾಯದಂತೆ ನಕ್ಸಲೀಯರು ಕಾರಣವಿಲ್ಲದೆ ಕೊಲೆ ಮಾಡುವಂಥ ಘಟನೆಗಳು ಅತ್ಯಂತ ವಿರಳ. ಮತ್ತು ಹರಿಜನರನ್ನು, ಹಿಂದುಳಿದವರನ್ನು ದಿನ ನಿತ್ಯ ಕೊಲ್ಲುವ ಜಮೀನ್ದಾರಿ ಭೂಮಿಹಾರರ ಎದೆಯ ಕಡೆಗಷ್ಟೇ ನಕ್ಸಲೀಯ ಬಂದೂಕಗಳು ಗುರಿಮಾಡಿ ನಿಂತಿವೆ. ಈ ಬಗ್ಗೆ ನಕ್ಸಲೀಯರ ಪ್ರಾಮಾಣಿಕತೆಯನ್ನು ಗೊರ್ಪಾ ಜಿಲ್ಲೆಯಲ್ಲಿ ನಡೆದ ಘಟನೆಗಳ ಹಿನ್ನೆಲೆಯಲ್ಲಿ ನೋಡಬಹುದು.

### ಹಾಡುಹಗಲಲ್ಲಿ ಕೊಲೆಗಳು

ಗೊರ್ಪಾ ಎಂಬುದು ಸೋನಾ ನದಿದಂಡೆ ಮೇಲಿರುವ ಒಂದು ಸಣ್ಣ ಹಳ್ಳಿ. ಈ ಹಳ್ಳಿಯಲ್ಲಿ 25 ಭೂಮಿಹಾರರ ಕುಟುಂಬಗಳಿದ್ದು ಅದೇ ಸಂಖ್ಯೆಯಲ್ಲಿ ಯಾದವ ಮತ್ತು ದುಶಾದ್ ಸಂಸಾರಗಳಿವೆ. ಹಳ್ಳಿಯ ಪಕ್ಕದಲ್ಲಿ ಒಂದು ಪ್ರೌಢ ಶಾಲೆ ಇದೆ. ಈ ಶಾಲೆಗೆ ಹರಿಜನ ಮತ್ತು ಹಿಂದುಳಿದ ಪಂಗಡಗಳ ವಿದ್ಯಾರ್ಥಿಗಳು ಹೋಗಲಾಗುವುದಿಲ್ಲ. ಏಕೆಂದರೆ ಈ ಶಾಲೆಯ ಎಲ್ಲಾ ಉಪಾಧ್ಯಾಯರು ಮತ್ತು ಬಹುಪಾಲು ವಿದ್ಯಾರ್ಥಿಗಳು ಭೂಮಿಹಾರ್ ಕುಟುಂಬಗಳಿಗೆ ಸೇರಿದವರು. ಇಲ್ಲಿನ ಭೂಮಿಹಾರ್ ಮತ್ತು ಯಾದವರು ಪರಸ್ಪರ ಮುಟ್ಟಿಸಿಕೊಂಡರೂ ಒಂದಾಣಿಕೆ ಇಲ್ಲ. ಯಾದವರು ಸ್ವಲ್ಪ ಜಮೀನನ್ನು ಭೂಮಿಹಾರರಿಗೆ ಭೋಗ್ಯಕ್ಕೆ ಕೊಟ್ಟಿದ್ದು 1976ರ ಮೇ ನಲ್ಲಿ ಕೋರ್ಟ್ ಆಜ್ಞೆಯ ಪ್ರಕಾರ ಆ ಜಮೀನು ಯಾದವರಿಗೆ ವಾಪಸ್ಸು ಸಿಕ್ಕಬೇಕಾಗಿತ್ತು. ಆದರೆ ಆ ತೀರ್ಪು ಕೊಡುವ ಹಿಂದಿನ ದಿನವೇ ಹೇಗೊ ತಿಳಿದುಕೊಂಡ ಭೂಮಿಹಾರ್ ಭೂಸ್ವಾಮಿಗಳು ಆ ಜಮೀನಿನಲ್ಲಿ ಕೆಲಸ ಮಾಡುತ್ತಿದ್ದ ಮೂವರು ಯಾದವರನ್ನು ಗುಂಡಿಕ್ಕಿ ಕೊಂದರು. ಈ ವಿಷಯ ತಿಳಿದ ನಕ್ಸಲೀಯರು ಇದ್ದಕ್ಕಿದ್ದಂತೆ ಅಗಸ್ಟ್ 1976ರಲ್ಲಿ ಕಾಣಿಸಿಕೊಂಡು ಕಾಲುವೆ ಪಕ್ಕ ಕುಳಿತಿದ್ದ ಐದು ಜನ ಭೂಮಿಹಾರರನ್ನು ಹಾಡುಹಗಲೇ ಗುಂಡಿಕ್ಕಿ ಕೊಂದರು. ಈ ನಕ್ಸಲೀಯರನ್ನು ಯಾದವರೇ ಕರೆಸಿದ್ದಾರೆಂದು ಭೂಮಿಹಾರರಿಗೆ ಸಂಶಯ ಬಂತು. ಆದ್ದರಿಂದ ಸಮಯಕ್ಕಾಗಿ ಕಾಯುತ್ತಿದ್ದ ಭೂಮಿಹಾರರು 1977ರ ಮಾರ್ಚ್ 11ರಂದು "ಜೈ ಬಜರಂಗ ಬಲಿ" ಎನ್ನುತ್ತ ಯಾದವ ಮತ್ತು ಹರಿಜನರನ್ನು ಸುತ್ತುವರಿದು ಮನೆಗಳಿಗೆ ಬೆಂಕಿ ಹಚ್ಚಿ, ಅವರನ್ನು ಬೆಂಕಿಗೆ ಎಸೆದರಲ್ಲದೆ ಇಬ್ಬರು ಹೆಂಗಸರು ಸೇರಿ ಐದು ಜನರನ್ನು ಗುಂಡಿಕ್ಕಿ ಕೊಂದರು. ಈ ಘಟನೆಯ ಸಂಬಂಧದಲ್ಲಿ ಪೋಲೀಸರು 47 ಜನ ಭೂಮಿಹಾರರ ಮೇಲೆ ಮೊಕದ್ದಮೆ ದಾಖಲೆ ಮಾಡಿಕೊಂಡಿದ್ದು ಇವರಲ್ಲಿ 20 ಜನ ಜೈಲಿನಲ್ಲಿದ್ದಾರೆ. ಮಿಕ್ಕ 27ಜನ ಹಳ್ಳಿಯಲ್ಲೇ ಇದ್ದರೂ ಅವರನ್ನು ಏಕೆ ಬಂಧಿಸಿಲ್ಲ ಎಂಬುದು ಅಲ್ಲಿನ ಜನಕ್ಕೆ ಅರ್ಥವಾಗದ ವಿಷಯವಾಗಿದೆ.

### ಮೊದಲ ನಕ್ಸಲೀಯ

ಅಂತೂ ಭೋಜಪುರ್ ಜಿಲ್ಲೆಯಲ್ಲಿ ಒಂದಲ್ಲಾ ಒಂದು ರೀತಿಯಲ್ಲಿ ಹೀಗೆ ಕಾಣಿಸಿಕೊಳ್ಳುತ್ತಿರುವ ಮತ್ತು ಉಲ್ಬಣಿಸುತ್ತಿರುವ ದಲಿತರ ಪರವಾದ ನಕ್ಸಲೀಯ ಚಳುವಳಿಗೆ ಒಂದು ಬಲವಾದ ಹಿನ್ನೆಲೆ ಇದೆ.

ಮಾಸ್ಟರ್ ಜಗದೀಶ್ ಮಹತೊ ಎಂಬ ಕುರ್ಮಿ ಜಾತಿಗೆ (ದಲಿತರ ಒಂದು ಉಪ ಜಾತಿ) ಸೇರಿದ ಯುವಕ ಹರ್ರಾದ ಜೈನ ಶಾಲೆಯಲ್ಲಿ ಉಪಾಧ್ಯಾಯನಾಗಿದ್ದ. ಇವನು 1967ರ ಹೊತ್ತಿಗೆ ಇಲ್ಲಿ ನಡೆದ ಪಂಚಾಯಿತಿ ಚುನಾವಣೆಯಲ್ಲಿ ಹರಿಜನರ ರಾಂನರೇಶ್‌ರಾಂ ಎಂಬ ಪ್ರಾಮಾಣಿಕ ವ್ಯಕ್ತಿಯ ಪರ ಚುನಾವಣಾ ಪ್ರಚಾರ ಮಾಡತೊಡಗಿದ. ರಾಂನರೇಶ್‌ರಾಂನ ವಿರುದ್ಧ ಸ್ಪರ್ಧಿಸಿದ್ದವ ಭೂಮಿಹಾರ್ ಜಾತಿಗೆ ಸೇರಿದ ಒಬ್ಬ ಪ್ರಚಂಡ ಭೂಮಾಲೀಕ. ಈ ಕಾರಣಕ್ಕಾಗಿ ಭೂಮಿಹಾರರು ಮಹತೊನಿಗೆ ವಿಚಿತ್ರ ಕಿರುಕುಳ ಕೊಟ್ಟ
ಸಿಕ್ಕಲ್ಲಿ ಥಳಿಸಿದರು. ಅವಮಾನಿಸಿದರು.
ಮಹತೊ ತನ್ನ ಹೆಂಡತಿ ಮತ್ತು ಮಕ್
ನೋಡಲು ಪ್ರವಾಸ ಹೋಗುವನೆಂದ
ಯಾದ. 1971ರಲ್ಲಿ ಬೋಜಪುರ್
ಮೊಟ್ಟ ಮೊದಲಿಗೆ ನಕ್ಸಲೀಯ ಚಟು
ಒಬ್ಬ ಭೂಮಿಹಾರನ ಕೊಲೆಯಾದ
ಯಾಯಿತು. ಒಂದು ಭಾನುವಾರ
1973ರಲ್ಲಿ ಜಗದೀಶ್ ಮಹತೊ
ಹೊಡೆತಗಳಿಂದ ಕೊಲ್ಲಲ್ಪಟ್ಟಿದ್ದ.

## ದಲಿತ

ದಲಿತರ ಸಮಸ್ಯೆಗಳು ಬಹುಮುಖವಾದ
ತಿಳ್ಳಗಿನ ಸಮಸ್ಯೆಗಳು ಇನ್ನು ಕೆಲವು
ಸಮಸ್ಯೆಗಳು. ತೆಳುವಾದ ಸಮಸ್ಯೆಗಳು
ದಲಿತನಿಗೆ ಕಾಲೇಜಿನಲ್ಲಿ ಸೀಟು ಸಿಕ್ಕಲಿ
ಅವನು ಕಾಲೇಜು ಓದಿ ಮುಗಿಸಿದ
ಸಿಕ್ಕಲಿಲ್ಲ ಎಂಬುದು ಮತ್ತು ಒಂದು
ತಹಸೀಲ್‌ದಾರ ದಲಿತನಿಗೆ ಕ್ಯಾಸ್ಟ್ ಸ
ಕೊಡಲು ಸತಾಯಿಸಿದನು, ಅದನ್ನು ಹೇ
ಅಪ್ಲೈ ಮಾಡಿದ ಮೇಲೂ ಆ ದಲಿತನಿಗೆ
ಲಿಲ್ಲ, ಇಂಥವು ಅತ್ಯಂತ ತೆಳುವಾದ ಹಾ
ನಿತ್ಯ ಎದುರಿಸುತ್ತಿರುವ ಸಮಸ್ಯೆಗಳು
ಸಮಸ್ಯೆ ಸ್ವತಂತ್ರವಾದುದಲ್ಲ. ಅದು ಉ
ಸಮಸ್ಯೆಗಳೊಡನೆ ಸಂಬಂಧವನ್ನು
ಅನೇಕ ತೆಳುವಾದ ಸಮಸ್ಯೆಗಳಿಂದ
ಅಂತಿಮ ಸಮಸ್ಯೆಗೆ ತಲುಪುತ್ತೇವೆ. ಅ
ಸಮಸ್ಯೆ. ಅದು ಹೇಗೆಂದರೆ ಒಂದು ಹ
ತರು ಹೊಟೇಲಿನ ಪ್ರವೇಶಕ್ಕಾಗಿ ಒಂ
ಎಬ್ಬಿಸಬಹುದು ಹೋಟೆಲಿನ ಪ್ರವೇ
ಯನ್ನು ಪರಿಹರಿಸಲು ಚಳುವಳಿ ಮಾಡ
ಹೋಟೇಲಿನ ಪ್ರವೇಶದ ನಂತರ ಹೊಟಿ
ತಿನ್ನಲು ಅನೇಕ ದಲಿತರಿಗೆ ಕಾಸಿ
ಬಹುದು ಆಗ ಆರ್ಥಿಕವಾದ ಹೀನ
ಮುಖ್ಯ ಸಮಸ್ಯೆಯಾಗುತ್ತದೆ.

ಆದ್ದರಿಂದ ಎಷ್ಟೋ ಸಲ ದಲಿತರ ಹತ್ತಿ
ಗಳು ಎಷ್ಟೇ ಭೀಕರವಾಗಿದ್ದರೂ ಅವು
ಸಮಸ್ಯೆಗಳಾಗಿರುವುದಿಲ್ಲ. ದಲಿತರ
ಳಿಕೆ ಹಳ್ಳಿಯಲ್ಲಿ ನಡೆಯುತ್ತಿದೆ ಎಂದ
ತ್ತಿರುವ ಅನೇಕರು ಅದಕ್ಕೆ ಕಾರಣ ಕಾ
ದದ್ದು ಜನತಾ ಬಂದದ್ದು, ಎಂದು
ಆದರೆ ಇದು ಸತ್ಯದ ಮೇಲೆ ಅವರು ನ
ಳಿಕೆ. ಯಾಕೆಂದರೆ ಕಾಂಗ್ರೆಸ್ ಮ
ಎರಡೂ ಪಕ್ಷಗಳು ಜಮೀನುದಾರರ ಪ
ರಡು ಅದಲುಬದಲು ಆಗುವುದರಿಂದ
ಗುತ್ತಿರುವ ಕಿರುಕುಳ ಕಡಿಮೆಯಾ

# ಮಾಲಿಕರನ್ನು ಬಲಿ ಕೇಳುವ ಭೋಜಪುರ ಜಿಲ್ಲೆ

**ಾಜಿಕ–ಆರ್ಥಿಕ ಸಮಸ್ಯೆ**

ನಂತರ ಅಲ್ಲಲ್ಲಿ ಹುಟ್ಟಿಕೊಂಡ ಬಹಾ ನಕ್ಸಲೀಯರು ಹರಿಜನರಾಗಿದ್ದರು. ೋಜಪುರ್ ಜಿಲ್ಲೆಯ ನಕ್ಸಲೀಯ ಚಳು ಹಿತ ಹರಿಜನರ ಮತ್ತು ಜಮೀನ್ದಾರಿ ರ ನಡುವಿನ ಹೋರಾಟವಾಯಿತು ವರದಿಯ ಪ್ರಕಾರ ಸಕಲ್ ದೀಪ್ ಸುಕೃತ್‌ಕಹಾರ್ ಮತ್ತು ಪ್ರಭು ಈ ಮೂವರು ಈಗ ಇಲ್ಲಿನ ನಕ್ಸಲೀಯ

ಭೋಜಪುರ್ ಜಿಲ್ಲೆಯ ನಕ್ಸಲೀಯ ಚಳುವಳಿಯ ಮುಖ್ಯ ಗುರಿ ಫ್ಯೂಡಲ್ ಜಮೀನ್ದಾರರಿಂದ ಜಮೀನು ಕಸಿದುಕೊಳ್ಳುವುದಷ್ಟೇ ಅಲ್ಲ. ಹಾಗೆ ನೋಡಿದರೆ ಬಿಹಾರದ ಬೇರೆಲ್ಲ ಜಿಲ್ಲೆಗಳಿಗಿಂತ ಭೋಜಪುರ್ ಜಿಲ್ಲೆಯ ಭೂಮಿಹಾರರು ಕಡಿಮೆ ಭೂಮಿ ಹೊಂದಿದ್ದಾರೆ. ಬೇರೆ ಜಿಲ್ಲೆಯ ಭೂಮಿಹಾರರು ಸಾವಿರ ಎಕರೆಗಟ್ಟಲೆ ಭೂಮಿ ಹೊಂದಿದ್ದರೆ ಭೋಜಪುರ್ ಜಿಲ್ಲೆಯ ಅತ್ಯಂತ ದೊಡ್ಡ ಜಮೀನ್ದಾರನೆಂದರೆ 80 ಎಕರೆ ಭೂಮಿ ಹೊಂದಿರುವವ. ಆದ್ದರಿಂದ ಭೋಜ್‌ಪುರ್ ಜಿಲ್ಲೆಯ ಮುಖ್ಯ ಸಮಸ್ಯೆ: "ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆ" ಅಥವಾ "ಮುಂದುವರಿದ ಮತ್ತು ಹಿಂದುಳಿದವರ ನಡುವಿನ ಹೋರಾಟ." ಒಂದು ಕಡೆ ಇಡೀ ಭೂ ಒಡೆತನವನ್ನು ತಮ್ಮ ಕೈಲಿರಿಸಿಕೊಂಡಿರುವ ಮತ್ತು ಅತ್ಯಂತ ಅಹಂಭಾವದ ಭೂಮಿಹಾರರು; ಮತ್ತೊಂದು ಕಡೆ ಭೂರಹಿತ, ಸಾಕಷ್ಟು ಕಲಿತ, ಸೈನ್ಯದಲ್ಲಿ ಕೆಲಸಕ್ಕಿರುವ ಮತ್ತು ಭೂಮಿಹಾರರ ಸಾಮಾಜಿಕ ಒಡೆತನದ ಬಗ್ಗೆ ಹಾಗೂ ತಮ್ಮ ಹಕ್ಕುಗಳ ಬಗ್ಗೆ ಪ್ರಜ್ಞೆವುಳ್ಳ ಹರಿಜನರು. ಒಂದು ಪಕ್ಷ ಭೂಮಿಹಾರರು ತಮ್ಮ ಭೂ ಒಡೆತನವನ್ನು ಕಳೆದುಕೊಂಡು ಬಿಟ್ಟರೆ ಖಂಡಿತಾ ಅವರ ದರ್ಪ ಮತ್ತು ದಬ್ಬಾಳಿಕೆ ನಾಶವಾಗುತ್ತದೆ ಎನ್ನುವುದು ತಿರಸ್ಕರಿಸುವ ಮಾತಲ್ಲ.

**ಹುಡುಕಿದ ಕಡೆ ಬಂದೂಕ**

ಭೋಜಪುರ್ ಜಿಲ್ಲೆಯ ಜೀವನದ ಒಂದು ಅಂಗವೇ ಆಗಿರುವ ಹಿಂಸಾಚರಣೆ ಈ "ಸಾಮಾಜಿಕ–ಆರ್ಥಿಕ" ಅಸಮತೆಯನ್ನು ಬುಡ ಸಹಿತ ಕಿತ್ತೊಗೆಯುವ ಗುರಿ ಇಟ್ಟುಕೊಂಡಿದೆ. ಶಸ್ತ್ರಾಸ್ತ್ರಗಳು ಇಲ್ಲಿನ ಜನಕ್ಕೆ ಎಷ್ಟು ಹತ್ತಿರವೆಂದರೆ ಭೋಜಪುರ್ ಜಿಲ್ಲೆಯ ಕರಗ್‌ಹಾರ್ ಎಂಬ ಭಾಗದಲ್ಲಿ ಇವತ್ತೂ ಸಹ 1200 ಬಂದೂಕಗಳಿವೆ ಎಂದು ಗೊತ್ತಾಗಿದೆ. ಮತ್ತು ಭೋಜಪುರ್ ಜಿಲ್ಲೆಯ ಯಾವುದೇ ವಿದ್ಯಾರ್ಥಿನಿಲಯ ಹುಡುಕಿದರೂ 25ರಿಂದ 30 ಬಂದೂಕಗಳು ಸಿಕ್ಕುತ್ತವೆ. (ಇವೆಲ್ಲ ಪೋಲೀಸರಿಂದಲೇ ಕಿತ್ತುಕೊಂಡವು.) ಮಾರ್ಚಿಯಲ್ಲಿ ನಡೆದ ಗೋಪಾರ್ ಘಟನೆಯ ನಂತರ ಭೂಮಿಹಾರರಿಂದ ಪೋಲೀಸರು 2000 ಬುಲೆಟ್ಟುಗಳನ್ನು ವಶಪಡಿಸಿಕೊಂಡಿದ್ದಾರೆ.

**ಉಲ್ಬಣಿಸುತ್ತಿರುವ ಪ್ರತಿಭಟನೆ**

ಈ ನಕ್ಸಲೀಯ ಚಳುವಳಿ ಆರ್ಥಿಕ–ಸಾಮಾಜಿಕ ಅಸಮಾನತೆ ವಿರುದ್ಧದ ಹೋರಾಟ ಎನ್ನುವುದನ್ನು ಒಪ್ಪದ ಪೋಲೀಸರು "ಕಾನೂನು ಪಾಲನೆ"ಯ ಹೆಸರಿನಲ್ಲಿ ಇದುವರೆಗೆ ಲೆಕ್ಕವಿಲ್ಲದಷ್ಟು ಹರಿಜನರನ್ನು ಕೊಲೆ ಮಾಡಿದ್ದಾರೆ, ಉದಾ:– 1973 ರ ಮೇ 6ನೇ ತಾರೀಖು ಚೌರಿ ಎಂಬಲ್ಲಿ ಪೋಲೀಸರು ನಾಲ್ಕು ಜನ ಹರಿಜನರನ್ನು ಕೊಂದು ಇಡೀ ಹಳ್ಳಿಯನ್ನೇ ನಾಶಮಾಡಿದರು. ನಂತರ "ನಕ್ಸಲೀಯರು ಈ ಹಳ್ಳಿಗೆ ನುಗ್ಗಿ ಆಹಾರ ಪದಾರ್ಥಗಳನ್ನು ಲೂಟಿ ಮಾಡಿದ್ದಾರೆ" ಎಂದು ವರದಿಯನ್ನು ದಾಖಲು ಮಾಡಿಕೊಂಡರು. ಇಲ್ಲಿನ ಜನರು ಹೇಳುವಂತೆ ಇಲ್ಲಿ ಕೊಲೆಯಾಗುವ ಒಬ್ಬೊಬ್ಬ ನಕ್ಸಲೀಯನಿಗೆ ಸಮನಾಗಿ ಮೂವರು ಮುಗ್ಧ ಜನರು ಕೊಲೆಯಾಗುತ್ತಾರೆ. ಭೋಜಪುರ್ ಜಿಲ್ಲೆಯ ನಕ್ಸಲೀಯ ಚಳುವಳಿಯ ಇತ್ತೀಚಿನ ಬೆಳವಣಿಗೆ ಎಂದರೆ ಕೇವಲ ಹರಿಜನರಷ್ಟೇ ಅಲ್ಲದೆ ಕೆಲವು ಭೂಮಿಹಾರ್ ಮತ್ತು ರಜಪೂತ್ ಜಾತಿಯ ಯುವಕರೂ ನಕ್ಸಲೀಯರಾಗಿ ಪರಿವರ್ತನೆಗೊಂಡಿರುವುದು; ಮತ್ತು ಇವರು ಪೋಲೀಸರು ಏನೆಲ್ಲಾ ಆಮಿಷ ತೋರಿದರೂ ಜಗ್ಗದೆ ಚಳುವಳಿಯನ್ನು ಎಲ್ಲಾ ಕಡೆ ಹರಡುತ್ತಿರುವುದು. ಈಗ ಪೋಲೀಸರೂ ಒಪ್ಪಿಕೊಳ್ಳುವಂತೆ ರಾಜಕೀಯ ಇತ್ಯರ್ಥ ಒಂದೇ ಇದಕ್ಕೆಲ್ಲ ಪರಿಹಾರ. ಇಲ್ಲಿನ ಒಬ್ಬ ಪೋಲೀಸ್ ಅಧಿಕಾರಿಯೇ ಉದ್ಗರಿಸುವಂತೆ "ನೀವು ಹೆಚ್ಚು ಹೆಚ್ಚು ಹತ್ತಿಕ್ಕುತ್ತಾ ಹೋದರೆ, ಅವರ ಪ್ರತಿಭಟನೆಯೂ ಉಲ್ಬಣಿಸುತ್ತಾ ಹೋಗುತ್ತದೆ ಎನ್ನುವ ರಾಜಕೀಯ ಸಿದ್ಧಾಂತ ಇಲ್ಲಿ ನಿಜವಾಗಿದೆ"

(ಸೌಜನ್ಯ : ಸಂಡೆ, ವಾರ ಪತ್ರಿಕೆ, 19.6.1977)

## ದಲಿತರ ಸಜೀವ ದಹನ

ಪಟನಾ ಜಿಲ್ಲೆಯ ಬೆಲ್ಚಿ ಎಂಬ ಗ್ರಾಮದಲ್ಲಿ ಮೇ 27 ರಂದು ಹರಿಜನನೊಬ್ಬನನ್ನು ಗುಂಡಿಕ್ಕಿ ಕೊಂದು, ಇತರ 13 ಜನರ ಕೈಕಾಲುಗಳನ್ನು ಕಟ್ಟಿ ಬೆಂಕಿಗೆಸೆದು ಸಜೀವ ದಹನ ಮಾಡಿದ ಪ್ರಕರಣ ನಡೆದಿದೆ

ಅಂದು ಮಧ್ಯಾಹ್ನ ಸುಮಾರು 50 ಜನ ಶಸ್ತ್ರಧಾರಿಗಳು ಗ್ರಾಮದ ಮೇಲೆ ದಾಳಿ ನಡೆಸಿ 40 ವರ್ಷ ವಯಸ್ಸಿನ ಹರಿಜನ ವ್ಯಕ್ತಿಯೊಬ್ಬನನ್ನು ಆತನ ಮನೆ ಬಾಗಿಲಿನಲ್ಲೇ ಗುಂಡಿಕ್ಕಿ ಕೊಂದು, ನಂತರ ಅವರುಗಳು ಸೌದೆ ಮತ್ತು ಬೆರಣಿಯನ್ನು ಸಂಗ್ರಹಿಸಿ ಅದರ ಮೇಲೆ ಡೀಸಲ್ ಎಣ್ಣೆ ಸುರಿದು ಬೆಂಕಿ ಹಚ್ಚಿ ಗುಂಡಿಟ್ಟು ಕೊಂದ ಹರಿಜನ ವ್ಯಕ್ತಿಯ ಶವವನ್ನು ಅದರಲ್ಲಿ ಹಾಕಿದರೆಂದೂ ಆಮೇಲೆ ತಲಾ 9 ಮತ್ತು 13 ವರ್ಷದ ಎರಡು ಮಕ್ಕಳು ಮತ್ತು ಇತರ 11 ಮಂದಿಯನ್ನು ಹಿಡಿದು ಅವರುಗಳ ಕೈಕಾಲು ಕಟ್ಟಿ ಬೆಂಕಿ ಬಳಿ ಎಳೆತಂದು ಒಬ್ಬೊಬ್ಬರನ್ನಾಗಿ ಬೆಂಕಿಗೆ ಎಸೆದರೆಂದೂ, ಬೆಂಕಿಗೆ ಹಾಕಲಾದ ಜನರ ಆರ್ತನಾದವನ್ನು ಕೇಳಿ ಗ್ರಾಮದ ಇತರರು ಸ್ಥಳಕ್ಕೆ ಧಾವಿಸಿದಾಗ ಶಸ್ತ್ರಧಾರಿಗಳ ಗುಂಪು ಅವರನ್ನು ಓಡಿಸಿತೆಂದು ತಿಳಿದು ಬಂದಿದೆ.

— (ಪತ್ರಿಕಾ ವರದಿ)

## ಏಕೆ ?

ಹಾಗಾದರೆ ನಮ್ಮ ಮುಖ್ಯ ಸಮಸ್ಯೆ ರಿ ಪದ್ಧತಿ. ಜಮೀನುದಾರರ ಪಕ್ಷಗಳು ುವುದರಿಂದ, ಪಟ್ಟದಿಂದ ಇಳಿಯುವುದ ರ ಬದುಕು ಬದಲಾಗುವುದಿಲ್ಲ. ಆದ್ದರಿಂದ ರಿ ಪದ್ಧತಿ ನಿರ್ಮೂಲನವಾಗುವುದರಿಂದ ುಖ್ಯ ಸಮಸ್ಯೆ ಹೋಗುವುದರೊಂದಿಗೆ ಟ್ಟಿದ ಹತ್ತಾರು ತೆಳುವಾದ ಸಮಸ್ಯೆ ಯವಾಗುತ್ತವೆ. ಇದು ಇನ್ನೂ ಸ್ಪಷ್ಟವಾಗ ಬೆಂಗಳೂರು ಅಥವಾ ಮೈಸೂರಿನಲ್ಲಿ ಲ್ಲಿ ಓದುತ್ತಿರುವ ದಲಿತ ವಿದ್ಯಾರ್ಥಿಯ ಂಕಟದ ಮೂಲ ಅವನ ಅಪ್ಪನ ಎದೆಯ ುತಿರುವ ಜಮೀನುದಾರಿ ಪದ್ಧತಿ ಎಂಬು ಯಬೇಕು.

ುಮಗಳಲ್ಲಿ ದಲಿತರ ಮೇಲೆ ನಡೆಯುತ್ತಿ ಗಳಿಗೆ ಮೂಲ ಕಾರಣವನ್ನು ಅರಿತ ಮೇಲೆ ವನ್ನು ಕಿತ್ತೊಗೆಯಲು ದಲಿತರು ತಡ ಸಂಘಟಿತರಾಗಬೇಕು ಈ ಹೋರಾಟ ೂಮಿಗಾಗಿ ನಡೆಸುವ ಹೋರಾಟ ಮಾತ್ರ ವರ್ಯಾದೆಗಾಗಿ ನಡೆಸುವ ಹೋರಾಟವೂ ಯಾಕೆಂದರೆ ಅಸ್ಪೃಶ್ಯತೆಯನ್ನು, ಆರ್ಥಿಕ ಯನ್ನು, ಸಾಮಾಜಿಕ ಅಸಮಾನತೆಯನ್ನು ಡಿ ಬೆಳೆಸುತ್ತಿರುವ ಬೆಂಬಲಿಸುತ್ತಿರುವ ಧೀ ಶಕ್ತಿಗಳೂ ಕೂಡ ಜಮೀನುದಾರಿ ಂದಿಗೇ ಹೆಣೆದುಕೊಂಡಿವೆ.

ಘಟನೆ ಎಂದರೆ ದಲಿತರು ಭೂಮಿಗಾಗಿ, ಲಿಗಾಗಿ, ಸಾಮಾಜಿಕ ಮರ್ಯಾದೆಗಾಗಿ ಹೋರಾಟಕ್ಕಾಗಿ ದಲಿತರು ಒಂದಾಗು ಸಮಾಜದ ರಚನೆಯಲ್ಲಿ ದಲಿತರಿಗೆ ಲ್ಲದ ಸ್ಥಿತಿ ಇದ್ದು, ಇದರಿಂದ ಅನೇಕ ಉಂಟಾಗಿವೆ ಈ ಸ್ಥಿತಿ, ದುಸ್ಥಿತಿಗಳ ಹೋರಾಟಕ್ಕಾಗಿ ದಲಿತ ಸಂಘಟನೆ ಆಗ

– ಏಕಲವ್ಯ

# ಶಿವಣ್ಣ ಪ್ರಕರಣದ ಹಿನ್ನೆಲೆಯಲ್ಲಿ ದಲಿತ ಸಂಘಟನೆಯ ಶಕ್ತಿ ಪರಿಚಯ

ಸಂವಿಧಾನಬದ್ಧವಾಗಿ ದಲಿತರಿಗೆ ಸಿಗಬೇಕಾದ ಸವಲತ್ತುಗಳನ್ನು ಜಾತಿದ್ವೇಷದಿಂದ ಜಾರಿ ಮಾಡಿಲ್ಲ ಎಂದು ಕೇಳಿದ ತಪ್ಪಿಗೆ ಕೆಲಸ ಕಳೆದುಕೊಂಡು ಕಳೆದ ಜೂನ್ ತಿಂಗಳಿನಲ್ಲಿ ಹೈಕೋರ್ಟ್ ಎದುರು ಅನ್ಯಾಯವನ್ನು ಪ್ರತಿಭಟಿಸಿ ಶ್ರೀ ಡಿ. ಶಿವಣ್ಣ ಕುಟುಂಬ ಸಮೇತ ಆಮರಣಾಂತ ಉಪವಾಸ ಹೂಡಿದ್ದರು. ಈ ಹಿನ್ನೆಲೆಯಲ್ಲಿ ನೋವಿನಿಂದ ದಲಿತರೆಲ್ಲಾ ಸಂಘಟನೆಗೊಳ್ಳುತ್ತಾ ಶಿವಣ್ಣನವರಿಗೆ ಬೆಂಬಲಿಸಿ ಅನ್ಯಾಯವನ್ನು ವಿರೋಧಿಸಿದರಲ್ಲದೆ ಅವರ ಪ್ರತಿಭಟನೆ ಹಂತ ಹಂತವಾಗಿ ಉಗ್ರ ಸ್ವರೂಪ ಪಡೆದುಕೊಳ್ಳುತ್ತಾ ಹೋದುದು ಆರೋಗ್ಯಕರ ಲಕ್ಷಣವಾಗಿತ್ತು. ಮತ್ತು ದಲಿತರ ಶಕ್ತಿಯ ಪರಿಚಯ ಮಾಡಿಸಿತು. ಇದಕ್ಕೆ ಉದಾಹರಣೆ ಶಿವಣ್ಣನವರ ಉಪವಾಸದ ಹಿನ್ನೆಲೆಯಲ್ಲಿ 19-6-77 ರಂದು ಬೆಂಗಳೂರಲ್ಲಿ ನಡೆದ ಬೃಹತ್ ಮೆರವಣಿಗೆ.

ಹೈಕೋರ್ಟ್‌ನಲ್ಲಿ ಪ್ರಥಮದರ್ಜೆ ಗುಮಾಸ್ತರಾಗಿದ್ದ ಶ್ರೀ ಡಿ. ಶಿವಣ್ಣ ಅವರು ಹೈಕೋರ್ಟ್ ಆಡಳಿತ ವಿಭಾಗದಲ್ಲಿ ಸಂವಿಧಾನದ ಪ್ರಕಾರ ಶೇಕಡಾವಾರು ಮೀಸಲಾತಿಯನ್ನು ಜಾರಿಗೆ ತರುವಲ್ಲಿ, ಮುಖ್ಯ ಸ್ಥಾನಗಳಲ್ಲಿ ದಲಿತ ವರ್ಗಗಳ ನೌಕರರನ್ನು ನೇಮಿಸುವುದರಲ್ಲಿ, ಬಡ್ತಿ ನೀಡುವುದರಲ್ಲಿ ಜಾತಿ ಮತ್ತು ಅಸ್ಪೃಶ್ಯತೆಯ ದೃಷ್ಟಿಯಿಂದ ಅನ್ಯಾಯ ನಡೆದಿದೆ ಎಂದು ಎರಡು ವರ್ಷದ ಕೆಳಗೆ ಸಮಾಜ ಕಲ್ಯಾಣ ಇಲಾಖೆಗೆ ಪತ್ರ ಬರೆದು ಹರಿಜನ-ಗಿರಿಜನ ನೌಕರರಿಗೆ ಆಗುತ್ತಿರುವ ಅನ್ಯಾಯಗಳನ್ನು ನಿವಾರಿಸಿ ಹಕ್ಕು ಬಾಧ್ಯತೆಗಳನ್ನು ಒದಗಿಸಿ ಕೊಡಬೇಕೆಂದು ಕೋರಿದ್ದರು. ಈಬಗ್ಗೆ ಸಮಾಜ ಕಲ್ಯಾಣ ಇಲಾಖೆ ಹೈಕೋರ್ಟ್ ಆಡಳಿತ ವರ್ಗವನ್ನು ವಿಚಾರಿಸಿತ್ತು. ಇದರಿಂದ ನ್ಯಾಯ ದೊರಕುವುದಿರಲಿ ಮತ್ತಷ್ಟು ಅನ್ಯಾಯವಾಯಿತು.

ಹೈಕೋರ್ಟ್ ಆಡಳಿತವರ್ಗ ಶಿವಣ್ಣನವರನ್ನು ಬೇರೆ ಖಾತೆಗೆ ವರ್ಗಾಯಿಸಿ ಅಲ್ಲಿ ಎರಡನೆ ದರ್ಜೆ ಗುಮಾಸ್ತನ ಕೈಕೆಳಗೆ ಕೆಲಸ ಮಾಡುವಂತೆ ಆದೇಶಿಸಿತು. ಶಿವಣ್ಣನವರು ಅಲ್ಲಿ ಕೆಲಸ ಮಾಡಲು ನಿರಾಕರಿಸಿದಾಗ ಒಬ್ಬ ವಿಚಾರಣಾ ಅಧಿಕಾರಿಯನ್ನು ನೇಮಿಸಿದರು. ಶಿವಣ್ಣ ತನ್ನನ್ನು ಸಮರ್ಥಿಸಿಕೊಳ್ಳಲು ಅವಕಾಶ ಕೊಡದೇ ಇದ್ದುದರಿಂದ ವಿಚಾರಣೆಗೆ ಹಾಜರಾಗಲಿಲ್ಲ. ಇದರಿಂದ ವಿಚಾರಣಾ ಅಧಿಕಾರಿಗಳು ಕೆಲಸದಿಂದ ತೆಗೆದುಹಾಕಲು ಶಿಫಾರಸುಮಾಡಿ [illegible]5ನೇ ಜನವರಿಯಲ್ಲಿ ಅವರನ್ನು ಕೆಲಸದಿಂದ ವಜಾಮಾಡಲಾಯಿತು.

ನಂತರ ತುರ್ತು ಪರಿಸ್ಥಿತಿಯ ದಿನಗಳಲ್ಲಿ ತಮಗೆ ಯಾವ ನ್ಯಾಯವೂ ದೊರಕದಿದ್ದು ಕಳೆದ ಜೂನ್‌ನಲ್ಲಿ ತನ್ನ 80ವರ್ಷದ ವೃದ್ಧ ತಂದೆ, ಹೆಂಡತಿ, ಮೂರು ಸಣ್ಣ ಮಕ್ಕಳ ಜೊತೆ ಹೈಕೋರ್ಟ್ ಎದುರು ಆಮರಣಾಂತ ಉಪವಾಸ ಸತ್ಯಾಗ್ರಹ ಆರಂಭಿಸಿದರು.

ಶಿವಣ್ಣ ಮತ್ತು ಕುಟುಂಬದವರ ಉಪವಾಸ ಸತ್ಯಾಗ್ರಹದಿಂದ ದಿನ ಕಳೆದಂತೆ ಪರಿಸ್ಥಿತಿ ಉಲ್ಬಣಗೊಳ್ಳುತ್ತಿತ್ತು. ಬಹುಶ; ಕರ್ನಾಟಕಾದ್ಯಂತ ಈ ಘಟನೆ ದಲಿತರ ಕಣ್ಣು ತೆರೆಸಿತು. ನಾಕೂ ದಿಕ್ಕುಗಳಿಂದಲೂ ಶಿವಣ್ಣನವರಿಗೆ ಬೆಂಬಲ ಸೂಚಿಸಿ ಈ ಬಗ್ಗೆ ಬೇಗ ನಿರ್ಣಯ ಕೈಗೊಳ್ಳದಿದ್ದರೆ ರಾಜ್ಯದಾದ್ಯಂತ ಬೃಹತ್ ಚಳವಳಿ ಆಗುವ ಸಂಭವ ಕಂಡುಬಂತು. ಅನೇಕ ಕಡೆಗಳಿಂದ ತರುಣರು ಧಾವಿಸಿಬಂದು ಶಿವಣ್ಣನವರಿಗೆ ಬೆಂಬಲಿಸಿ ಪೂರಕ ಸತ್ಯಾಗ್ರಹ ಹೂಡಿದರು. ಪೂರಕ ಸತ್ಯಾಗ್ರಹ ಮಾಡಲು ತರುಣರು ತಾ ಮುಂದೆ ನಾ ಮುಂದೆ ಎಂದು ಮುನ್ನುಗ್ಗುತ್ತಿದ್ದರು. ಅನೇಕ ಕಡೆ ಮೆರವಣಿಗೆ, ಬಹಿರಂಗ ಸಭೆ ನಡೆಸಲೂ ವ್ಯವಸ್ಥೆ ಆಗುತ್ತಿತ್ತು. ಶಿವಣ್ಣನವರ ನೆಪವಾಗಿಟ್ಟುಕೊಂಡು ವ್ಯವಸ್ಥೆಯ ಬಗ್ಗೆ ತುಳಿತಕೊಳಪಟ್ಟವರ ಸಂಘಟನೆ ರೂಪು ತಳೆಯುತ್ತಿತ್ತು. ದಲಿತರ ಸಂಘಟನೆ ಸರಿಯಾದ ಸಂಘಟನೆಯಾದರೆ ಅದು ಎಂಥ ಶಕ್ತಿಯುತವಾದ ಸಂಘಟನೆ ಎಂಬುದಕ್ಕೆ ಈ ಘಟನೆ ಸಾಕ್ಷಿ.

ಶಿವಣ್ಣನವರ ಪ್ರಕರಣದಲ್ಲಿ ದಲಿತ ಶಾಸಕರು, ಮಂತ್ರಿಗಳು ಕಣ್ಮುಚ್ಚಿ ಕುಳಿತಿದ್ದ ಸಮಯದಲ್ಲಿ ಜನತಾ ಪಕ್ಷದ ಮುಖಂಡ ಶ್ರೀ ಜೆ. ಹೆಚ್. ಪಟೇಲ್‌ರು ಮಧ್ಯಸ್ಥಿಕೆ ವಹಿಸಿ ಮುಖ್ಯನ್ಯಾಯಾಧೀಶರೊಡನೆ ಮಾತಾಡಿ ಶಿವಣ್ಣನವರಿಗೆ ಪುನರ್ ನೇಮಕದ ಆಶ್ವಾಸನೆ ಒಪ್ಪಂದಕ್ಕೆ ಬಂದು ಶಿವಣ್ಣನವರು ತತ್ಕಾಲಿಕವಾಗಿ ಉಪವಾಸ ನಿಲ್ಲಿಸಿದರು. ಈಗ ದಲಿತ ಸಂಘಟನೆ ಉಳಿದಕಡೆ ಬೇರು ಬಿಡಬೇಕಾಗಿದೆ. ○

### ಲೆಟ್ ಹಿಮ್ ಡೈ

ಸಂವಿಧಾನ ಬದ್ಧವಾದ ಹಕ್ಕುಗಳನ್ನು ಕೇಳಿ ಹೈಕೋರ್ಟಿನಿಂದ ವಜಾ ಆದ ನೌಕರ ಶ್ರೀ ಶಿವಣ್ಣನವರು ನ್ಯಾಯಕ್ಕಾಗಿ ಆಮರಣಾಂತ ಉಪವಾಸ ಸತ್ಯಾಗ್ರಹ ಮಾಡುತ್ತಿದ್ದಾಗ ದಲಿತ ಕ್ರಿಯಾ ಸಮಿತಿಯ ಸದಸ್ಯರು ಹರಿಜನ ಮಂತ್ರಿಗಳು ಮತ್ತು ಎಂ. ಎಲ್. ಎ.ಗಳನ್ನು ಭೇಟಿ ಮಾಡಿ ಸೂಕ್ತ ಕ್ರಮವನ್ನು ತೆಗೆದುಕೊಳ್ಳಲು ವಿಚಾರಿಸಲು ಲೋಕೋಪಯೋಗಿ ಸಚಿವ ಎಂ. ಮಲ್ಲಿಕಾರ್ಜುನಸ್ವಾಮಿಯವರನ್ನು ಶಿವಣ್ಣನ ಬಗ್ಗೆ ಪ್ರಸ್ತಾಪಿಸಿದಾಗ 'ಲೆಟ್ ಹಿಮ್ ಡೈ. ಹಿ ಇಸ್ ನಾಟ್ ಎ ಷೆಡ್ಯೂಲ್ಡ್ ಕಾಸ್ಟ. ಹಿ ಮ್ಯಾರೀಡ್ ಎ ಬ್ರಾಹ್ಮಿನ್ ಗರ್ಲ್' ಎಂದು ಆರ್ಭಟಿಸಿ ಕ್ರಿಯಾ ಸಮಿತಿಯವರನ್ನು ಅವಮಾನಿಸಿ ಕಳಿಸಿದರಂತೆ

## ಹರಿಜನರು ಎಲ್ಲೆಲ್ಲಿ ಎಷ್ಟೆಷ್ಟಿದ್ದಾರೆ ?

| ರಾಜ್ಯದ ಹೆಸರು : | ಶೇಕಡಾವಾರು ಪ್ರಮಾಣ |
|---|---|
| ಜಮ್ಮು ಮತ್ತು ಕಾಶ್ಮೀರ | 8.0 |
| ಪಂಜಾಬ್ | 21.9 |
| ಹಿಮಾಚಲ ಪ್ರದೇಶ | 23.5 |
| ಹರಿಯಾಣ | 18.5 |
| ಡೆಲ್ಲಿ | 12.5 |
| ರಾಜಾಸ್ಥಾನ | 16.8 |
| ಉತ್ತರ ಪ್ರದೇಶ | 20.9 |
| ಗುಜರಾತ್ | 6.5 |
| ಮಧ್ಯ ಪ್ರದೇಶ | 13.1 |
| ಬಿಹಾರ | 14.1 |
| ಒರಿಸ್ಸಾ | 15.7 |
| ಮಹಾರಾಷ್ಟ್ರ | 5.5 |
| ಅಸ್ಸಾಂ | 7.0 |
| ಮಣಿಪುರ | 1.6 |
| ತ್ರಿಪುರ | 10.0 |
| ವೆಸ್ಟ್ ಬೆಂಗಾಲ | 19.6 |
| ಕರ್ನಾಟಕ | 13.4 |
| ಆಂಧ್ರಪ್ರದೇಶ | 13.9 |
| ತಮಿಳು ನಾಡು | 17.9 |
| ಕೇರಳ | 8.2 |

( ಲಭ್ಯವಿರುವ ಸರ್ಕಾರಿ ಅಂಕಿ ಅಂಶಗಳು )

( 3ನೇ ಪುಟದಿಂದ )

ಕಟ್ಟಿದ ನಾಲ್ಕೇ ನಾಲ್ಕು ಗೋಡೆಗಳು ಇನ್ನೂ ಕೆಂಪನಹಾಡಿಯಲ್ಲಿ ಪಾಳಾಗಿ ನಿಂತಿವೆ. ಮುರುಕು ಗೋಡೆಗಳ ಕಡೆ ಕೈಮಾಡಿ "ಈ ಮ ಗಳ ದುಡ್ಡು ತಿಂದವ ಕೋಟೆಯಲ್ಲಿ ಈಗಲ ಇದ್ದಾನೆ ಸ್ವಾಮಿ" ಎನ್ನುವ ಕಾಡುಕುರುಬ ಹೊರ ಜಗತ್ತಿಗೆ ಪೂರ್ತಿ ಅಪರಿಚಿತರು. ಇವರ ಮೈಸೂರು ನೋಡಿದವರು ನಾಲ್ಕೈದು ಜನ ದರೆ, ಬೆಂಗಳೂರು ನೋಡಿದವರು ಇಲ್ಲವೇ ಇ ಆಶ್ಚರ್ಯದ ಮಾತೆಂದರೆ ಗೂಡಿನಂತ ಗುಡಿಸ ಗಳ ಈ ಕೊಂಪೆಗೆ ಸರ್ಕಾರದಿಂದ "ಲೈಟಿ ಗ್ರಾಂಟೂ" ಬಂದಿದೆಯಂತೆ ?

ಈಗ ಈ ಕಾಡಿಗೆ ನೀಟಾಗಿ ಪ್ಯಾಂಟು ಶರಟು ಹಾ ಕೊಂಡು ಬಂದು "ಸರ್ಕಾರ" "ಉದ್ಧಾರ" ಎಂ ಏನೇನೊ ಮಾತಾಡುವ ಅಧಿಕಾರಿಗಳನ್ನು ಕಂ ಈ ಜನಕ್ಕೆ ಅವರೊಂದು ಬಿಡಿಸಲಾಗದ ಒಗ ಗುತ್ತಾರೆ.

# ಹುಟ್ಟಿಡಗಿಸಿ ನಗಬೇಕು

ಭಾರತ ಮಾತೆಯ ಮಡಿಲಲ್ಲಿ
ಜನ್ಮ ತಳೆದ ಧನ್ಯ ಜೀವಿ ನೀನು
ಕೋಟಿ ಪುರುಷಗಳ ತಪಸ್ಸು ನೀಡಿದ ಫಲ ತಿಳಿಯಿತೆ?
ಧರ್ಮ ಭೂಮಿಯಿದು ದೇವರ ಅಪರಾವತಾರ
ವೆಸಿಸಿದ ಮಠಾಧಿಪತಿ ಜಗದ್ಗುರು ಪವಾಡ ಪುರುಷರುದಿಸಿದ ನಾಡು.

ದೈವ ಸೃಷ್ಟಿಯ ಪ್ರಕಾರ ನೀನು ಪಂಚಮ
ನಾದುದಕೆ ಚಿಂತಿಸದಿರು. ಪಾಪ
ತಗುಲೀತು. ಕಿಂಕರನಾದುದಕೆ ಮುಖ ಕಿಂಕರ ಮಾಡದಿರು.
ಯತ್ಪರಾರ್ಥಂ ಶರೀರಂ.
ಜನತಾ ಸೇವೆಯೇ ಜನಾರ್ಧನ ಸೇವೆ
ಧಣಿಯು ರೂಪದಲಿ ದೇವರು ಬಂದಿಹನು ಮಾಡು ಅವನ ಸೇವೆ.
ಹಕ್ಕು ಬಿಡು ಕರ್ತವ್ಯ ತೊಡು.
ಅತಿ ಆಸೆ ಗತಿಗೇಡು.
ಹಾಸಿಗೆ ಇದ್ದಷ್ಟು ಚಾಚು ಕಾಲ
ಆತ್ಮ ತೃಪ್ತಿಯ ಪಡೆ ಒತ್ತು ಅವನ ಕಾಲ,
ಕಾಲ ಮೋಕ್ಷದ ಪಡೆ. ಹಾಗೇ ಒತ್ತುತ್ತ ಮೇಲು ಮೇಲಕ್ಕೆ
ಹೋಗು ಸಿಗುವುದು ಆತ್ಮ ಲಿಂಗ.

ಪುರುಷ ಸೂಕ್ತ ಸಾಮ್ರಾಜ್ಯದ ವಿರಾಟ್ ಪುರುಷನ ಹಾಸಿಗೆಯಲ್ಲೂ ಸಿಗದ ಲಿಂಗವದು
ಸಾಮಾನ್ಯವಲ್ಲ. ಈ ಜನ್ಮದ ಸೇವೆ
ಇಹದಿಂದ ಪರಕ್ಕೆ ಸಾಗಿಸುವುದು ನಿನ್ನ ನಿಸಂದೇಹ
ತಪ್ಪುವುದು ಮುಂದಿನ ಜನ್ಮ. ಇತ್ಯಾದಿ
ಹಾಳು ಮೂಳು ನೂರೆಂಟು ಬಗೆ ವಿಷಗಳು
ಹಿಡಿದ ಕಾರ್ಕೋಟಕನ ಕಡಿಸಿ ನಿನ್ನ ವಿಕಾರಗೊಳಿಸಿ

ರಂಗಿನ ಸಾಬೂನುಗ ಳ್ಳೆಗಳ ಗಾಳಿಯಲಿ ಊದಿ
ತಾರೆಗಳ ವರ್ಣಿಸಿ ಆಕಾಶವನು ತೋರಿ
'ಶ್ವಾನ ಕ್ಷೀರ'ದ ಮಹತ್ವ ಹೇಳಿ ಕನ್ನಡಿಯ ಗಂಟು ತೋರಿ
ಬೂದಿ ಬಂಗಾರ ಮಕ್ಕಳ ಉದುರಿಸಿ
'ಒಳಗೊಳಗೇ ಬೇರು ಕೊಯ್ದು
ಲೋಕದೆದುರಿಗೆ ನೀರು ಹುಯ್ದು' ಇನ್ನೂ ಏನೇನೊ
ಮೋಡಿ ಮಾಡಿದ ಈ ಹಾವಾಡಿಗರ ಹಾವರಿಗರ
ಸುಟ್ಟು ಹುಟ್ಟಡಗಿಸಿ ನಗಬೇಕು ಒಮ್ಮೆ
ಆಯಾಗಿ.

— ಗುರುರಾಜ ಬೀಡಿಕರ್.

## ದಲಿತರು ಸಂಸಾರಿಗಳಲ್ಲ!

ಮಾನ್ಯರೆ,

ನಮ್ಮೂರಿನ ಪಟೇಲಮ್ಮನ ಹಬ್ಬದ ಮಾರನೇ ದಿನ ನಡೆದ ಒಂದು ಘಟನೆಯಿಂದ ನಾನು ಚಿಂತಾಕ್ರಾಂತನಾಗಿದ್ದೇನೆ. ಈ ಘಟನೆಯು ನಮ್ಮ ನಾಡಿನ ಎಲ್ಲ ದಲಿತರಿಗೂ ತಿಳಿಯಲಿ ಎಂಬುದು ನನ್ನ ಬಯಕೆ.

ಶನಿವಾರ ಬೆಳಿಗ್ಗೆ ಸು. 9 ಗಂಟೆ ನಾನು ನಮ್ಮ ಹಳ್ಳಿಯ ಪಕ್ಕದಲ್ಲಿ ಬೇರೊಂದು ಹಳ್ಳಿಗೆ ಹೋಗುವ ರಸ್ತೆಯಲ್ಲಿ ನಡೆಯುತ್ತಿದ್ದೆ. ಅದೇ ವೇಳೆಯಲ್ಲಿ ನಮ್ಮೂರಿನ ಗೌಡರೊಬ್ಬರ ಬಾವಿಗೆ ಕಲ್ಲುಗಳನ್ನು ಗಾಡಿಗಳಲ್ಲಿ ಇಬ್ಬರು ಹೊಡಿದುಕೊಂಡು ಬಂದರು. ಆ ಗಾಡಿ ನನ್ನ ಪಕ್ಕಕ್ಕೆ ಬಂದಿತು. ಗಾಡಿಯಲ್ಲಿದ್ದವರು ನನ್ನನ್ನು ಪ್ರಶ್ನೆ ಕೇಳಲು ಶುರು ಮಾಡಿದರು:

ಗಾಡಿಯವ 1: ಯಾವೂರಪ್ಪ?
ನಾನು: ಇದೇ ಊರು ಕಣಪ್ಪ.
ಗಾಡಿಯವ 2: ಈ ಊರಲ್ಲಿ ಎಷ್ಟು ಮನೆಗಳಿವೆ?
ನಾನು: ಸು. 50 ಮನೆಗಳಿರಬಹುದು.
ಗಾಡಿ 1: ಸರಿ ಈ ಮನೆಗಳಲ್ಲಿ ಸಂಸಾರಿಗಳ ಮನೆಗಳು ಎಷ್ಟಿವೆ?
ನಾನು: ಇಲ್ಲಿರುವವರೆಲ್ಲ ಸಂಸಾರಿಗಳೇ.
ಗಾಡಿ 2: ಹಂಗಲ್ಲಪ್ಪಾ ನಾವು ಕೇಳಿದ್ದು ನಿಮ್ಮ ಊರಿನಲ್ಲಿ ಸಂಸಾರಿಗಳ (ಒಕ್ಕಲಿಗರ) ಮನೆಗಳು ಎಷ್ಟಿವೆ ಎಂದು ಕೇಳಿದ್ದು.
ನಾನು: ಎಲ್ಲರೂ ಸಂಸಾರಿಗಳೇನಪ್ಪಾ ಇಲ್ಲಿರೋರು.
ಅವರಿಬ್ಬರೂ: ನೀನೇನೋ ಕ್ರಾಸ್ ಮಾತಾಡ್ತಿಯ ಹೋ.

ಇಷ್ಟರಲ್ಲಿ ಅವರ ಮತ್ತು ನನ್ನ ದಾರಿಗಳು ಬೇರೆ ಬೇರೆ ಆದವು ನನಗೆ ಒಂದು ರೀತಿಯಾಯಿತು. ನಮ್ಮ ತಂದೆಯವರ ಬಳಿ ಹೋಗಿ ಈ ವಿಚಾರವನ್ನು ತಿಳಿಸಿದೆ. ಆಗ ನಮ್ಮ ತಂದೆಯವರು ನಗುತ್ತಾ ಸಂಸಾರಿಗಳೆಂದರೆ ಒಕ್ಕಲಿಗರು. ನಮ್ಮ ಜನಗಳು ಸಂಸಾರಿಗಳಲ್ಲ ಇವರನ್ನು ಗುಂಡು ಗೋವಿಗಳೆಂದು ಕರೆಯುತ್ತಾರೆ. ಎಂದು ಹೇಳಿದರು.

ಮಾನ್ಯರೆ,

ನಮ್ಮ ದಲಿತರನ್ನೇಕೆ ಸಂಸಾರಿಗಳೆನ್ನದೆ ಹೀಗೆ ಗುಂಡು ಗೋವಿಗಳೆಂದು ಕರೆಯುತ್ತಾರೆ? ನಾವುಗಳು ಮದುವೆ ಮಾಡಿಕೊಂಡಿಲ್ಲವೆ? ಮನೆ ಕಟ್ಟಿಕೊಂಡಿಲ್ಲವೆ? ಸಂಸಾರ ಮಾಡುತ್ತಿಲ್ಲವೆ? ನಮ್ಮನ್ನೇಕೆ ಸಂಸಾರಿಗಳೆಂದು ಕರೆಯಬಾರದ? "ಸಂಸಾರಿಗಳು" ಶಬ್ದ ಒಕ್ಕಲಿಗರಿಗಷ್ಟೇ ಆದರೆ ಸಂಸಾರಿಕ ದಲಿತರೆಲ್ಲ ಯಾರು? ಶಬ್ದಗಳ ಮೇಲೂ ಹೀಗೆ ಹಿಡಿತ ಸಾಧಿಸಿರುವ ಈ ವ್ಯವಸ್ಥೆ ಎಂಥದ್ದು?

— ಕೆ. ಎಂ. ನಾರಾಯಣಸ್ವಾಮಿ ಕೊರಂಡ ಹಳ್ಳಿ.

---

# ಎಂ. ಎಲ್. ಎ. ಬೆಂಬಲ...

[ ಮೊದಲ ಪುಟದಿಂದ ]

ಸ್ಟೇಷನ್‌ಗೆ ಹೋದ. ಪೋಲೀಸ್ ಇನ್ಸ್‌ಪೆಕ್ಟರ್ ೧೬.೭.೭೭ ರ ರಾತ್ರಿ ಸುಮಾರು ಏಳು ಗಂಟೆ ಸಮಯದಲ್ಲಿ ರಂಗನಾಯಕನ ಕುಟುಂಬದವರನ್ನೆಲ್ಲಾ ಅರೆಸ್ಟ್ ಮಾಡಿದ.

ನಂತರ ಅದೇ ರಾತ್ರಿ ಗೌತಮ ರಂಗನಾಯಕ ಗುತ್ತಿಗೆ ಮಾಡುತ್ತಿದ್ದ ಜಮೀನಿನಲ್ಲಿ ಬೆಳೆದಿದ್ದ ಬೆಳೆ ಕೊಯ್ದುಕೊಂಡು, ಗುಡಿಸಲಿಗೆ ಬೆಂಕಿ ಹಾಕಿದ್ದಾಗಿಯೂ, ಆಗ ಪೋಲೀಸ್ ಇನ್ಸ್‌ಪೆಕ್ಟರ್ ಮತ್ತು ಗುರುಸಿದ್ದಪ್ಪ ಎಂ. ಎಲ್. ಎ. ಹಾಜರಿದ್ದರೆಂದೂ ತಿಳಿದು ಬಂದಿದೆ.

○

ನಂಜನಗೂಡು ತಾ|| ನಗರ್ಲೆಯಲ್ಲಿ, ನ್ಯಾಯ ದೊರಕಿಸಿಕೊಡಬೇಕಾದ ಅದೇ ಭೂ ನ್ಯಾಯ ಮಂಡಲಿ ಸದಸ್ಯ ಮತ್ತು ಎಂ. ಎಲ್. ಎ. ಗುರುಸಿದ್ದಪ್ಪನವರ ದಬ್ಬಾಳಿಕೆಯಿಂದ, ಅಬ್ದುಲ್ ಗಫೂರ್ ಎಂಬ ಬಡ ಮುಸ್ಲೀಮನು ೨೦ ವರ್ಷಗಳಿಂದಲೂ ಸಾಗುವಳಿ ಮಾಡುತ್ತಿದ್ದ ಜಮೀನನ್ನು ಕಳೆದುಕೊಂಡು ಅನಾಥವಾಗಿರುವ ಮತ್ತೊಂದು ಘಟನೆ ವರದಿಯಾಗಿದೆ.

ಈ ಜಮೀನು ಗುರುಸಿದ್ದಪ್ಪನ ತಮ್ಮ ಬಸವರಾಜಪ್ಪನದಾಗಿದ್ದು ಆತ ಸುಮಾರು ಇಪ್ಪತ್ತು ವರ್ಷಗಳ ಹಿಂದೆಯೇ ಅಬ್ದುಲ್ ಗಫೂರ್‌ನಿಗೆ ಗುತ್ತಿಗೆ ಕೊಟ್ಟಿದ್ದ. ಗುತ್ತಿಗೆ ತೆಗೆದುಕೊಂಡ ಜಮೀನು ಆಗ ಸಾಗುವಳಿ ಮಾಡಲು ಯೋಗ್ಯವಾಗಿರಲಿಲ್ಲವೆಂದೂ, ತಾನೇ ಹಗಲೂ ರಾತ್ರಿ ಬೆವರು ಸುರಿಸಿ ದುಡಿದು ಸಾಗುವಳಿಗೆ ಯೋಗ್ಯ ಮಾಡಿದೆನೆಂದು ಅಬ್ದುಲ್ ತಾನು ಪಟ್ಟ ಕಷ್ಟವನ್ನು ತೋಡಿಕೊಳ್ಳುವರು.

ಅಬ್ದುಲ್ ತುರ್ತುಪರಿಸ್ಥಿತಿ ಸಮಯದಲ್ಲಿ ಭೂ ಸುಧಾರಣಾ ಕಾನೂನಿನನ್ವಯ ತಾನು ಗುತ್ತಿಗೆ ಮಾಡುತ್ತಿದ್ದ ಜಮೀನಿನ ಮೇಲೆ ಡಿಕ್ಲರೇಶನ್ ಕೊಟ್ಟ. ಇದು ತಿಳಿದಿದ್ದರೂ ಬಸವರಾಜಪ್ಪ ಈ ಬಗ್ಗೆ ಹೊರಗೆ ಯಾವ ತಕರಾರನ್ನು ಮಾಡದಿದ್ದರೂ ಒಳಗೊಳಗೆ ಕುದಿಯುತ್ತಿದ್ದ.

ಚುನಾವಣೆಯ ನಂತರ ಬಸವರಾಜಪ್ಪ ತನ್ನ ಅಣ್ಣನ ಬೆಂಬಲದಿಂದಾಗಿ ದರ್ಪ ತೋರಿಸತೊಡಗಿದ. ಈಗಾಗಲೇ ಅಬ್ದುಲ್ ಗುತ್ತಿಗೆ ಜಮೀನಿಗೆ ಜೋಳ ಬಿತ್ತಿದ್ದು, ಮೊಳದುದ್ದ ಪೈರು ಬಂದಿತ್ತು. ಇದನ್ನು ಕಂಡವನೆ ಬಸವರಾಜಪ್ಪ ತನ್ನವರನ್ನು ಕಟ್ಟಿಕೊಂಡು ಒಂದು ದಿನ ಬೆಳೆದಿದ್ದ ಪೈರನೆಲ್ಲಾ ಕುಯ್ದು ನಾಶ ಮಾಡತೊಡಗಿದ. ಆಗತಾನೆ ಜಮೀನಿಗೆ ಬಂದ ಅಬ್ದುಲ್ ಇದನ್ನು ನೋಡಿ ಅಳುತ್ತಾ ಅಸಹಾಯಕನಾಗಿ ಬಸವರಾಜಪ್ಪನ ಕಾಲುಗಳನ್ನು ಹಿಡಿದು ಗೋಗರೆದರೂ ಬಿಡದೆ ಆತ "ಯಾರಪ್ಪಂದು ಜಮೀನು ಅಂತ ಡಿಕ್ಲರೇಶನ್ ಕೊಟ್ಟೆ ಸೂಳೆ ಮಗನೆ, ಇದು ನಮ್ಮ ಸರ್ಕಾರ, ನಿಮ್ಮ ಆಟ ಏನೂ ನಡೆಯಾದಿಲ್ಲ" ಎಂದು ಬೈಯುತ್ತಾ ಅಬ್ದುಲ್‌ನನ್ನು ದೂರ ತಳ್ಳಿ ಮತ್ತೆ ಪೈರು ನಾಶಮಾಡತೊಡಗಿದನಲ್ಲದೆ, ತನ್ನ ಕಡೆಯವರಿಗೆ ಅಬ್ದುಲ್‌ನನ್ನು ಹೊಡೆಯಲು ಹೇಳಿದನೆಂತಲೂ, ಹೆದರಿ ಊರಿಗೆ ಓಡಿ ಬಂದ ಅಬ್ದುಲ್ ನೇರವಾಗಿ ಬಸವರಾಜಪ್ಪನ ಅಣ್ಣನಾದ ಎಸ್. ಎಸ್. ಗುರುಸಿದ್ದಪ್ಪ [ ಎಂ. ಎಲ್. ಎ., ಭೂ ನ್ಯಾಯ ಮಂಡಲಿ ಸದಸ್ಯ ] ನಿಗೆ ಆದದ್ದೆಲ್ಲಾ ತಿಳಿಸಿ ಕೇಳಿಕೊಂಡಾಗ ಅವ ಪೈರನ್ನು ಕುಯ್ದು ಹಾಕುವುದನ್ನು ನಿಲ್ಲಿಸಿದನೆಂದು ತಿಳಿದು ಬಂದಿದೆ.

ತಿಂಗಳುಗಳು ಕಳೆದು ಇದ್ದ ಬದ್ದ ಪೈರು ಬೆಳೆದು ಜೋಳ ತೆನೆಯಾಗಿದ್ದಾಗ ಅಬ್ದುಲ್ ತೆನೆ ಕುಯ್ಯಲು ಗುರು ಮಾಡಿದ. ಆಗ ಬಸವರಾಜಪ್ಪ ತನ್ನ ಕಡೆಯ ನಾಲ್ಕಾರು ಜನರೊಂದಿಗೆ ಬಂದವನೆ ಕುಯ್ದಿದ್ದ ತೆನೆಯನ್ನು ಕಿತ್ತುಕೊಂಡು ಅಬುಲ್ದನ್ನು ಜಮೀನಿನಿಂದ ಓಡಿಸಿದನೆಂದೂ, ಓಡಿ ಬಂದ ಅಬ್ದುಲ್ ಭೂ ನ್ಯಾಯ ಮಂಡಳಿ ಸದಸ್ಯ ಗುರುಸಿದ್ದಪ್ಪನನ್ನು ಕಂಡು ತನಗೆ ಆಗುತ್ತಿರುವ ಅನ್ಯಾಯವನ್ನೆಲ್ಲ ಅಳುತ್ತಾ ತೋಡಿಕೊಂಡನೆಂದೂ, ಆದರೆ ನ್ಯಾಯ ಹೇಳಬೇಕಾದ ಅವರು ಅಬ್ದುಲ್‌ನನ್ನೇ ಹೀನಾಯವಾಗಿ ಬೈದು ಕಳಿಸಿದರೆಂದೂ ಗೊತ್ತಾಗಿದೆ. ●

# ಕರ್ನಾಟಕ ನಿರುದ್ಯೋಗಿಗಳಲ್ಲಿ ಒಂದು ಮನವಿ

ಭಾರತ ನಿರುದ್ಯೋಗಿಗಳ ತವರೂರು. ಈ ದೇಶದಲ್ಲಿ ವಿದ್ಯಾವಂತ ರಿಜಿಸ್ಟರ್ಡ್ ನಿರುದ್ಯೋಗಿಗಳ ಸಂಖ್ಯೆ ಒಂದು ಕೋಟಿ ಹತ್ತಿರ ಇದೆ. ಇನ್ನು ರಿಜಿಸ್ಟರ್ಡ್ ಆಗದೇ ಇರುವ ವಿದ್ಯಾವಂತರ ಸಂಖ್ಯೆ ಲೆಕ್ಕ ಇಲ್ಲ. ಹಾಗೆಯೇ ಅವಿದ್ಯಾವಂತ ನಿರುದ್ಯೋಗಿಗಳ ಸಂಖ್ಯೆ ಅಪಾರ.

ಜನತಾ ಸರ್ಕಾರವು ತನ್ನ ಚುನಾವಣಾ ಪ್ರಣಾಳಿಕೆಯಲ್ಲಿ 'ಉದ್ಯೋಗ' ತನ್ನ ಮೂಲಭೂತ ಹಕ್ಕನ್ನಾಗಿ ಪರಿಗಣಿಸುತ್ತೇವೆಂದು ಹೇಳಿ ಈಗ ಅದನ್ನು ಸಂಪೂರ್ಣ ಮರೆತಿರುವಂತೆ ತೋರುತ್ತೆ. ಆದ್ದರಿಂದ ರಾಜ್ಯ, ಜಿಲ್ಲೆ, ತಾಲ್ಲೂಕು ಮಟ್ಟದಲ್ಲಿ ನಿರುದ್ಯೋಗಿಗಳು ತಕ್ಷಣವೇ ಸಂಘಗಳನ್ನು ಸ್ಥಾಪಿಸಿ,ಈ ಕೆಳಕಂಡ ಹಕ್ಕು-ಬಾಧ್ಯತೆಗಳಿಗಾಗಿ ಹೋರಾಡಬೇಕೆಂದು ಕಳಕಳಿಯಿಂದ ವಿನಂತಿಸಿಕೊಳ್ಳುತ್ತೇವೆ.

೧. ರಾಜ್ಯದಲ್ಲಿರುವ ಎಲ್ಲಾ ನಿರುದ್ಯೋಗಿಗಳಿಗೂ ಸರ್ಕಾರ ಈ ಕೂಡಲೇ ನಿರುದ್ಯೋಗ ಭತ್ಯವನ್ನು ನೀಡಬೇಕು.

೨. ಯಾವುದೇ ರಾಷ್ಟ್ರೀಕೃತ ಬ್ಯಾಂಕುಗಳ ಮೂಲಕ ನಿರುದ್ಯೋಗಿಗಳಿಗೆ ಯಾವುದೇ ಆಧಾರ ಪತ್ರವಿಲ್ಲದೆ ನಿರುದ್ಯೋಗಿಯ ವಿದ್ಯಾಭ್ಯಾಸದ ಪ್ರಮಾಣ ಪತ್ರದ ಮೇಲೆ ಸ್ವಂತ ಉದ್ಯಮ ಮಾಡಲು ೫೦೦೦-೦೦ [ ಐದು ಸಾವಿರ ] ರೂಪಾಯಿಗಳಿಗೆ ಕಡಿಮೆಯಿಲ್ಲದೆ ಸುಲಭ ಕಂತುಗಳಲ್ಲಿ ಮರುಪಾವತಿ ಮಾಡುವ ಸಾಲ ಪ್ರತಿಯೊಬ್ಬನಿಗೂ ಕೊಡಬೇಕು.

೩. ನಿರುದ್ಯೋಗಿ ಆಕಸ್ಮಾತ್ ಅಪಘಾತಕ್ಕೀಡಾದರೆ, ಜೀವನದಲ್ಲಿ ಜಿಗುಪ್ಸೆಗೊಂಡು ದುರಂತಕ್ಕೊಳಗಾದರೆ ಅಂಥವರ ಮನೆಯವರಿಗೆ ಸರ್ಕಾರವು ೧೫,೦೦೦-೦೦ ರೂ. ಕಡಿಮೆಯಿಲ್ಲದೆ ಪರಿಹಾರ ಧನ ಕೊಡಬೇಕು.

೪. ಉದ್ಯೋಗ ಮೂಲ ಶಿಕ್ಷಣ ತಕ್ಷಣವೇ ಜಾರಿಗೆ ಬರಬೇಕು.

೫. ಸಂವಿಧಾನದಲ್ಲಿ ಉದ್ಯೋಗದ ಹಕ್ಕು ಒಂದು ಮೂಲಭೂತ ಹಕ್ಕಾಗಬೇಕು.

ಹೆಚ್ಚಿನ ವಿವರಗಳಿಗೆ ವ್ಯವಹರಿಸಿ : ಜಿ. ಬಿ. ಶಿವಣ್ಣ, ಸಂಚಾಲಕ, ನಿರುದ್ಯೋಗಿಗಳ ಸಂಘ, ಎಸ್. ಎಂ. ಸಿ. ೨ನೇ ಕ್ರಾಸ್, ೨ನೇ ಬ್ಲಾಕ್ [ ಬಲಭಾಗ ] ಭದ್ರಾವತಿ

[ ಮೊದಲ ಪುಟದಿಂದ ]

ರಿಗೆ ರಕ್ಷಣೆ ಕೊಡದೆ ಬೆಂಕಿ ಹಚ್ಚುತ್ತಿದ್ದ ನಾಕಯರನ್ನೇ ಬೆಂಬಲಿಸಿದರೆಂದು ತಿಳಿದು ಬಂದಿದೆ.

"ದಲಿತರನ್ನು ರಕ್ಷಿಸಬೇಕಾದ ಪೋಲೀಸ್ ಅಧಿಕಾರಿಗಳೇ, ಮುಂದೆ ನಿಂತು ದಲಿತರ ಮೇಲೆ ದಬ್ಬಾಳಿಕೆ ನಡೆಸಲು ಕಾರಣವಾದ ಇಂಥ ಪೋಲೀಸ್ ಅಧಿಕಾರಿ ವರ್ಗದ ವಿರುದ್ಧ ಮತ್ತು ಈ ಘಟನೆಗೆ ಕಾರಣರಾದವರ ಮೇಲೆ ಸೂಕ್ತ ಕ್ರಮ ಕೈಗೊಳ್ಳುವಂತೆ ಸರ್ಕಾರವನ್ನು ಒತ್ತಾಯಿಸಲು, ಮತ್ತು ಇನ್ನು ಮುಂದೆ ಇಂಥ ಘಟನೆಗಳ ವಿರುದ್ಧ ಸಂಘಟಿತರಾಗಲು ಯಳಂದೂರು ಮತ್ತು ಕೊಳ್ಳೆಗಾಲ ತಾಲ್ಲೂಕಿನ ಎಲ್ಲಾ ದಲಿತ ಸಂಘ ಸಂಸ್ಥೆಗಳ ಮುಖಂಡರೂ ಇಷ್ಟರಲ್ಲೇ ಒಂದು ನಿರ್ಣಯಕ್ಕೆ ಬರಲಿದ್ದಾರೆಂದು" ಕೊಳ್ಳೇಗಾಲದ ಅಂಬೇಡ್ಕರ್ ಮೆಮೋರಿಯಲ್ ಅಸೋಸಿಯೇಷನ್‌ನ ಕಾರ್ಯದರ್ಶಿ ಶ್ರೀ ವಿಜಯ ಪ್ರಕಾಶ್ ಮತ್ತು ಶ್ರೀ ಜಯಣ್ಣ ತಿಳಿಸಿದ್ದಾರೆ.

ಮಾನ್ಯ ಓದುಗರೆ,

ಪಂಚಮ ಕಷ್ಟದಲ್ಲಿದೆ. ಚಂದಾ ಹಣ ಇನ್ನೂ ಕೊಡದಿರುವವರು ಮತ್ತು ಚಂದಾ ಮುಗಿದಿರುವವರು ಬೇಗ ತಮ್ಮ ಚಂದಾ ಹಣವನ್ನು ಎಂ. ಓ. ಮೂಲಕ ಕಳುಹಿಸಿ ಸಹಕರಿಸಿ. —ಸಂಪಾದಕ

ಸಂಪಾದಕ : ರಾಮಸೇನ ರಾಕೆ, ಜೊತೆಗೆ : ಶಿವಾಜಿ ಗಣೇಶನ್, ಶಿವಮಲ್ಲ ದೇವನೂರು, ಪ್ರಕಾಶಕ : ಹೆಚ್. ಗೋವಿಂದಯ್ಯ
ವಿಳಾಸ : ೨೩೪೪/೨, ಕೆ. ಜಿ. ಕೊಪ್ಪಲು, ಮೈಸೂರು–೪ ಮುದ್ರಣ : ಆಂದೋಲನ ಮುದ್ರಣ, ಮೈಸೂರು–೪